WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ನವೆಂಬರ್ ೩, ೨೦೧೧ (ಕಾರ್ತೀಕ ೧೨, ಶಕ ವರ್ಷ ೧೯೩೩) | ಸಂಚಿಕೆ ೪೩ |
|---|---|---|

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**FORM IV**

**(See Rule 12)**

**NOTICE**

IT IS HEREBY NOTIFIED THAT THE UNDERSIGNED HAS CHANGED HER/HIS NAME FROM **IRAPPA CHANNAPPA VADDAR** TO **IRAPPA CHANNAPPA JALIHAL.**

PD-116 **IRAPPA CHANNAPPA VADDAR**

**FORM IV**

**(See Rule 12)**

**NOTICE**

IT IS HEREBY NOTIFIED THAT THE UNDERSIGNED HAS CHANGED HER/HIS NAME FROM **SHANKARAPPA. S/o HULAGAPPA. VADDAR** TO **SHANKARAPPA. S/o HULAGAPPA. LAKKALAKATTI.**

PD-117 **SHANKARAPPA. S/o HULAGAPPA. VADDAR**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ನಂ. 720, ಶಿಂಷಾ ಭವನ, 8ನೇ ಬ್ಲಾಕ್, 46ನೇ ಅಡ್ಡರಸ್ತೆ, ಜಯನಗರ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: EST-1-274/2001-02, ದಿನಾಂಕ: 13–10–2011**

**ಪರಿಶಿಷ್ಟ ಪಂಗಡದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿ.**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಒಂದು ಬ್ಯಾಕ್‌ಲಾಗ್ ಹುದ್ದೆಯ ಬಗ್ಗೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಕುರಿತು.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21–11–2001 (ದಿನಾಂಕ; 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸೆನೆನಿ 2001 ದಿನಾಂಕ: 13–02–2001.

3) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಡಿ 132 ಎಸ್‌ಎಡಿ 97 ದಿನಾಂಕ: 8–2–2000.

4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೇನೆನಿ 2001 ದಿನಾಂಕ: 13–02–2001.

5) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 1–6–2002 (ದಿನಾಂಕ; 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

6) ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಹೊರಡಿಸಿದ ಈ ಕಛೇರಿಯ ಮೊದಲನೇ ಅಧಿಸೂಚನೆ ಸಂಖ್ಯೆ: EST–1–274/2001–02 ದಿನಾಂಕ: 30–01–2002 (ದಿನಾಂಕ: 14–02–2002 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ) (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ್ದು)

7) ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆಗೆ ಸೇರಿದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಮೊದಲನೇ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ: EST–1–274/2001–02 ದಿನಾಂಕ: 8–8–2002. (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ್ದು)

8) ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಹೊರಡಿಸಿದ ಈ ಕಛೇರಿಯ ಎರಡನೇ ಅಧಿಸೂಚನೆ ಸಂಖ್ಯೆ: EST–1–274/2001–02 ದಿನಾಂಕ: 17–08–2002 (ದಿನಾಂಕ: 22–08–2002 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ). (ಬೆಳಗಾಂ ಜಿಲ್ಲೆಗೆ ಸೇರಿದ್ದು)

9) ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಎರಡನೇ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ: EST–1–274/2001–02 ದಿನಾಂಕ: 9–1–2004. (ಬೆಳಗಾಂ ಜಿಲ್ಲೆಗೆ ಸೇರಿದ್ದು)

10) ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 02–09–2011.

11) ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16–11–2005.

12) ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 03–09–2011.

13) ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆಗೆ ಸೇರಿದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ: EST-1-274/2001-02 ದಿನಾಂಕ: 03–09–2011. (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ್ದು)

**ಪ್ರಸ್ತಾವನೆ:**

ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿನ ಬೆರಳಚ್ಚುಗಾರರ ವೃಂದದಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಗಳಿಂದ ಉಲ್ಲೇಖ (6) ರ ಈ ಕಛೇರಿಯ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರಸಂ | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಪಂಗಡದಲ್ಲಿ ಗುರ್ತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | ಈ ಬ್ಯಾಕ್‌ಲಾಗ್ ಹುದ್ದೆಯನ್ನು ಗುರ್ತಿಸಲ್ಪಟ್ಟ ಜಿಲ್ಲೆಯ ಹೆಸರು |
|---|---|---|---|
| 1 | ಸಾಮಾನ್ಯ ಅರ್ಹತಾ ಅಭ್ಯರ್ಥಿ | ಒಂದು | ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ |

ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಅವುಗಳ ಪೈಕಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಅರ್ಜಿಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅಂತಹ ಅಭ್ಯರ್ಥಿಗಳು ತಮ್ಮ ಬ್ಯಾಕ್‌ಲಾಗ್ ಅರ್ಜಿಯೊಂದಿಗೆ ಸಲ್ಲಿಸಿದ ನಿಗದಿತ ವಿದ್ಯಾರ್ಹತೆಯ ಅಂದರೆ S.S.L.C. ಮತ್ತು ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳ ಆಧಾರದ ಮೇಲೆ ಅತಿ ಹೆಚ್ಚು ಶೇಕಡಾವಾರು ಅಂಕ ಗಳಿಸಿದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಗಳನ್ನು ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಯ ಮೀಸಲಾತಿಗೆ ಅನುಗುಣವಾಗಿ Merit ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಮುಖ್ಯಪಟ್ಟಿಯಲ್ಲಿ ಮತ್ತು ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿ ಉಲ್ಲೇಖ (5) ರ ಸರ್ಕಾರದ ಅಧಿಸೂಚನೆ ಅನ್ವಯ 1:1 ರ ಪ್ರಮಾಣದಲ್ಲಿ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಗಳಿರುವ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ತಾತ್ಕಾಲಿಕ ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (7) ರನ್ವಯ ದಿನಾಂಕ: 8–8–2002 ರಂದು ಪ್ರಕಟಿಸಿ ಸದರಿ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು 30 ದಿನಗಳೊಳಗೆ ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಈ ರೀತಿ ಉಲ್ಲೇಖ (7) ರನ್ವಯ ದಿನಾಂಕ: 08–08–2002 ರಂದು ಪ್ರಕಟಿಸಿದ ಈ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಆಯ್ಕೆಯಾದ ಇಂದಿರಮ್ಮ ಎಂಬ ಈ ಬ್ಯಾಕ್‌ಲಾಗ್ ಅಭ್ಯರ್ಥಿಯು ಉಲ್ಲೇಖ (8) ರನ್ವಯ ದಿನಾಂಕ: 17–08–2002 ರ ಎರಡನೇ ಅಧಿಸೂಚನೆ ಮೂಲಕ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿ ಕರೆಯಲಾಗಿದ್ದ ಈ ಇಲಾಖೆಯ ಬೆಳಗಾಂ ಜಿಲ್ಲೆಯಲ್ಲಿನ ಬೆರಳಚ್ಚುಗಾರರ ವೃಂದದಲ್ಲಿ ಗುರ್ತಿಸಲಾದ ಪರಿಶಿಷ್ಟ ಪಂಗಡದ ಮಹಿಳಾ ಮೀಸಲಾತಿ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿಯೂ ಸದರಿ ಇಂದಿರಮ್ಮ ಇವರು ಬ್ಯಾಕ್‌ಲಾಗ್ ಅರ್ಜಿಯನ್ನು ಸಲ್ಲಿಸಿದ್ದರ ಮೇರೆಗೆ ಅದನ್ನು ಸಹ ನಿಯಮಾನುಸಾರ ಪರಿಶೀಲಿಸಿ ಇದೇ ಇಂದಿರಮ್ಮ ಇವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆಳಗಾಂ ಜಿಲ್ಲೆಯಲ್ಲಿ ಗುರ್ತಿಸಲಾದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ದಿನಾಂಕ: 9–1–2004 ರಂದು ಉಲ್ಲೇಖ (9) ರನ್ವಯ ಪ್ರಕಟಿಸಿದ ಎರಡನೇ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲೂ ಸಹ ಬೆರಳಚ್ಚುಗಾರರೆಂದು ಆಯ್ಕೆ ಮಾಡಲಾಯಿತು.

ಈ ರೀತಿ ಈ ಇಲಾಖೆಯಲ್ಲಿ ಮೊದಲ ಬಾರಿಗೆ ದಿನಾಂಕ: 8–8–2002 ರಂದು ಉಲ್ಲೇಖ (7) ರನ್ವಯ ಪ್ರಕಟಿಸಿದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿಯೂ ಮತ್ತು ಎರಡನೇ ಬಾರಿಗೆ ದಿನಾಂಕ: 9–1–2004 ರಂದು ಉಲ್ಲೇಖ (9) ರನ್ವಯ ಪ್ರಕಟಿಸಿದ ಬೆಳಗಾಂ ಜಿಲ್ಲೆಗೆ ಸೇರಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿಯೂ ಸಹ ಸದರಿ ಇಂದಿರಮ್ಮ ಇವರೇ ಎರಡು ಬಾರಿಯು ಬೆರಳಚ್ಚುಗಾರರಾಗಿ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆಯಾದ ಕಾರಣ, ಸದರಿಯವರಿಗೆ ಜಿಲ್ಲಾ ನೋಂದಣಾಧಿಕಾರಿಗಳು ತುಮಕೂರು ಇವರ ಮುಖಾಂತರ ದಿನಾಂಕ: 20–9–2004 ರನ್ವಯ ಈ ಕಛೇರಿಯಿಂದ ಸಮಸಂಖ್ಯೆ ನೋಟೀಸ್‌ನ್ನು ಜಾರಿ ಮಾಡಿ, ಸದರಿ ನೋಟೀಸ್‌ನಲ್ಲಿ ಇವರನ್ನು ಈ ರೀತಿ ಎರಡು ಬಾರಿ ತಾತ್ಕಾಲಿಕವಾಗಿ ಆಯ್ಕೆ ಮಾಡಿರುವ ವಿಷಯವನ್ನು ಪ್ರಸ್ತಾಪಿಸಿ ಈ ಎರಡು ಆಯ್ಕೆಗಳ ಪೈಕಿ ಮೊದಲನೇ ಬಾರಿಗೆ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾಗಿರುವ ಪ್ರಕಾರ GM ಅಭ್ಯರ್ಥಿಯಾಗಿ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಹೊಂದಲು ಇಚ್ಛಿಸುವಿರೋ? ಅಥವಾ ಎರಡನೇ ಬಾರಿಗೆ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಹೊಂದಲು ಇಚ್ಛಿಸುವಿರೋ? ಎಂಬ ವಿಷಯದ ಬಗ್ಗೆ ಸದರಿ ನೋಟೀಸ್ ತಲುಪಿದ ದಿನಾಂಕದಿಂದ ಮೂವತ್ತು ದಿನಗಳಲ್ಲಿ ಅವರ ಲಿಖಿತ ಅಭಿಪ್ರಾಯವನ್ನು ಸಲ್ಲಿಸುವಂತೆ ಸದರಿ ಇಂದಿರಮ್ಮ ಇವರಿಗೆ ಸೂಚಿಸಲಾಯಿತು.

ಇದಕ್ಕೆ ಉತ್ತರವಾಗಿ ಸದರಿ ಇಂದಿರಮ್ಮ ಇವರು ದಿನಾಂಕ: 19–07–2005 ರಂದು ಸಲ್ಲಿಸಿದ ತಮ್ಮ ಲಿಖಿತ ಮನವಿಯಲ್ಲಿ ತಾವು ಈಗಾಗಲೇ ಡೆಪ್ಯುಟಿ ರಿಜಿಸ್ಟ್ರಾರ್ ಆಫ್ ಕೋ ಆಪರೇಟಿವ್ ಇಲಾಖೆ ತುಮಕೂರು ಇಲ್ಲಿ ಶೀಘ್ರಲಿಪಿಗಾರರಾಗಿ ಕೆಲಸ ನಿರ್ವಹಿಸುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಮೊದಲನೇ ಬಾರಿಗೆ ಉಲ್ಲೇಖ (7) ರನ್ವಯ ದಿನಾಂಕ; 8–8–2002 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಬೆರಳಚ್ಚುಗಾರರಾಗಿ ಆಯ್ಕೆಯಾಗಿರುವ ಪ್ರಕಾರ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ನೇಮಕಾತಿ ಹೊಂದಲು ತಮಗೆ ಇಷ್ಟವಿಲ್ಲವೆಂದು ಮತ್ತು ಎರಡನೇ ಬಾರಿಗೆ ಉಲ್ಲೇಖ (9) ರನ್ವಯ ದಿನಾಂಕ: 9–1–2004 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಬೆರಳಚ್ಚುಗಾರರಾಗಿ ಆಯ್ಕೆಯಾಗಿರುವ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿಯೂ ಸಹ ನೇಮಕಾತಿ ಹೊಂದಲು ತಮಗೆ ಇಷ್ಟವಿಲ್ಲವೆಂದು ಹಾಗೂ ಈ ಎರಡೂ ರೀತಿಯ ತಮ್ಮ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಗಳನ್ನು ರದ್ದುಪಡಿಸಿ ಈ ಎರಡೂ ಆಯ್ಕೆಗಳಲ್ಲಿ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಗಳನ್ನು ಬೆರಳಚ್ಚುಗಾರರೆಂದು ಈ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಆಯ್ಕೆ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಂಟೆ ತಕರಾರುಗಳು ಏನೂ ಇರುವುದಿಲ್ಲವೆಂದು ಸದರಿ ಇಂದಿರಮ್ಮ ಇವರು ವಿನಂತಿಸಿದ ಕಾರಣ ದಿನಾಂಕ: 08–08–2002 ರಂದು ಉಲ್ಲೇಖ (7) ರನ್ವಯ ಮೊದಲ ಬಾರಿಗೆ ಪ್ರಕಟಿಸಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಇವರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಇವರ ಕೋರಿಕೆಯಂತೆ ಉಲ್ಲೇಖ (10) ರನ್ವಯ ದಿನಾಂಕ: 02–09–2011 ರಂದು ಹೊರಡಿಸಿದ ರದ್ದತಿ ಆದೇಶದಲ್ಲಿ ರದ್ದುಪಡಿಸಲಾಯಿತು.

ಇದೇ ರೀತಿ ದಿನಾಂಕ: 09–01–2004 ರಂದು ಉಲ್ಲೇಖ (9) ರನ್ವಯ ಎರಡನೇ ಬಾರಿಗೆ ಪ್ರಕಟಿಸಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಬೆಳಗಾಂ ಜಿಲ್ಲೆಯಲ್ಲಿನ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಸದರಿ ಇಂದಿರಮ್ಮ ಇವರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಸಹ ಇವರ ಕೋರಿಕೆಯಂತೆ ಉಲ್ಲೇಖ (11) ರನ್ವಯ ದಿನಾಂಕ: 16–11–2005 ರಂದು ಹೊರಡಿಸಿದ ರದ್ದತಿ ಆದೇಶದಲ್ಲಿ ರದ್ದುಪಡಿಸಲಾಯಿತು.

ಇದೇ ರೀತಿ ಉಲ್ಲೇಖ (7) ರನ್ವಯ ದಿನಾಂಕ: 08–08–2002 ರಂದು ಪ್ರಕಟಿಸಿದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀಮತಿ ಸಿ.ಇ. ವಸಂತಕುಮಾರಿ ಇವರನ್ನು ಅಂತಿಮವಾಗಿ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡಲು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಅದನ್ನು ಕಳುಹಿಸುವಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರಿಗೆ ದಿನಾಂಕ 08–08–2002 ರಿಂದಲೂ ಈ ಕಛೇರಿಯಿಂದ ಪತ್ರ ಬರೆಯಲಾಗುತ್ತಿತ್ತು.

ಈ ಬಗ್ಗೆ ಎಷ್ಟೇ ಪ್ರಯತ್ನ ಪಟ್ಟರೂ ಸದರಿ ಸಿ.ಇ. ವಸಂತಕುಮಾರಿ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಬಾರದೇ ಇದ್ದುದರಿಂದ ಈ ಬಗ್ಗೆ ಸದರಿ ಜಿಲ್ಲಾಧಿಕಾರಿಗಳಿಗೆ ಹಲವಾರು ಬಾರಿ ಬರೆದ ನೆನಪೋಲೆ ಪತ್ರದ ಪ್ರತಿಗಳನ್ನು ಸದರಿ ಸಿ.ಇ. ವಸಂತಕುಮಾರಿ ಇವರಿಗೂ ಸಹ ಕಳುಹಿಸಿ

ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಒದಗಿಸಬೇಕಾದ ಅಗತ್ಯ ದಾಖಲೆಗಳನ್ನು ಸದರಿ ಜಿಲ್ಲಾಧಿಕಾರಿಗಳಿಗೆ ತಕ್ಷಣವೇ ಒದಗಿಸಿ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಈ ಕಛೇರಿಗೆ ಕಳುಹಿಸುವ ವ್ಯವಸ್ಥೆ ಮಾಡುವಂತೆ ಈ ಅಭ್ಯರ್ಥಿಗೆ ಸೂಚಿಸಲಾಯಿತು. ಈ ರೀತಿ ಬರೆದ ಹಲವಾರು ಪತ್ರಗಳ ಪೈಕಿ ದಿನಾಂಕ: 30–08–2004 ರಂದು ಈ ಅಭ್ಯರ್ಥಿಗೆ ಕಳುಹಿಸಿದ ಪತ್ರವು ಸದರಿಯವರಿಗೆ ತಲುಪದೇ ವಿಳಾಸ ಸರಿ ಇಲ್ಲವೆಂಬ ಕಾರಣದಿಂದ ಅಂಚೆ ಇಲಾಖೆಯಿಂದ Addressee not known ಎಂಬ ಷರಾದೊಂದಿಗೆ ಸದರಿ ಪತ್ರವು ಈ ಕಛೇರಿಗೆ ವಾಪಸ್ ಬಂದಿರುತ್ತದೆ.

ಆದರೆ ಈ ರೀತಿ ಎಷ್ಟೇ ಪ್ರಯತ್ನ ಪಟ್ಟರೂ ಸದರಿ ಸಿ.ಇ. ವಸಂತಕುಮಾರಿ ಇವರಿಂದಾಗಲೀ ಅಥವಾ ಸದರಿ ಜಿಲ್ಲಾಧಿಕಾರಿಗಳಿಂದಾಗಲೀ ಯಾವುದೇ ರೀತಿಯ ಉತ್ತರ ಬಾರದ ಕಾರಣ, ಸದರಿ ಸಿ.ಇ. ವಸಂತಕುಮಾರಿ ಇವರಿಗೆ ದಿನಾಂಕ: 18–12–2010 ರನ್ವಯ ಈ ಕಛೇರಿಯಿಂದ ಸಮಸಂಖ್ಯೆ ನೋಟೀಸನ್ನು ಜಾರಿ ಮಾಡಿ ಸದರಿ ನೋಟೀಸ್‌ನಲ್ಲಿ ನಿಮಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕಾತಿ ಹೊಂದಲು ಇಚ್ಛೆ ಇದೆಯೋ? ಅಥವಾ ಇಲ್ಲವೋ? ಎಂಬುದರ ಬಗ್ಗೆ ನಿಮ್ಮ ಸ್ಪಷ್ಟ ಹಾಗೂ ನಿರ್ದಿಷ್ಟ ಅಭಿಪ್ರಾಯವನ್ನು ಲಿಖಿತ ಮೂಲಕ ಸಲ್ಲಿಸುವಂತೆ ಸದರಿ ಅಭ್ಯರ್ಥಿಗೆ ನಿರ್ದೇಶಿಸಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಸದರಿ ಸಿ.ಇ. ವಸಂತಕುಮಾರಿ ಇವರು ದಿನಾಂಕ; 27–12–2010 ಮತ್ತು ದಿನಾಂಕ: 6–1–2011 ರಂದು ಈ ಕಛೇರಿಗೆ ಸಲ್ಲಿಸಿದ ಸದರಿ ಮನವಿಗಳಲ್ಲಿ ತಾನು ಈಗಾಗಲೇ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕಿರಿಯ ಸಹಾಯಕಿ ಹುದ್ದೆಯಲ್ಲಿ ನೌಕರಿ ಮಾಡುತ್ತಿರುತ್ತೇನೆಂದು ಇದರಿಂದಾಗಿ ತಮಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರಳಾಗಿ ನೌಕರಿ ಪಡೆಯಲು ಹಾಗೂ ಕೆಲಸ ಮಾಡಲು ತಮಗೆ ಇಚ್ಛೆ ಇರುವುದಿಲ್ಲವಾದ್ದರಿಂದ ನನ್ನ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳಿಂದ ಪಡೆದು ಸಲ್ಲಿಸುವ ಅಗತ್ಯವಿರುವುದಿಲ್ಲವೆಂದು ಈ ಕಛೇರಿಗೆ ತಿಳಿಸುತ್ತಾ, ಉಲ್ಲೇಖ (7) ರನ್ವಯ ದಿನಾಂಕ: 8–8–2002 ರಂದು ಪ್ರಕಟಿಸಿರುವ ಬೆರಳಚ್ಚುಗಾರರ ಪರಿಶಿಷ್ಟ ಪಂಗಡದ ಈ ಬ್ಯಾಕ್‌ಲಾಗ್ ತಾತ್ಕಾಲಿಕ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿರುವ ತಮ್ಮ ಹೆಚ್ಚುವರಿ ತಾತ್ಕಾಲಿಕ ಬ್ಯಾಕ್‌ಲಾಗ್ ಆಯ್ಕೆಯನ್ನು ರದ್ದುಪಡಿಸಿ ತಮ್ಮ ಬದಲಿಗೆ ಬೇರೊಬ್ಬ ಅಭ್ಯರ್ಥಿಯನ್ನು ಸದರಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡಿಕೊಂಡು ನೇಮಿಸಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ಸದರಿ ಸಿ.ಇ. ವಸಂತಕುಮಾರಿ ಇವರು ಈ ಕಛೇರಿಗೆ ಮನವಿ ಸಲ್ಲಿಸಿದ ಕಾರಣ ದಿನಾಂಕ: 08–08–2002 ರಂದು ಉಲ್ಲೇಖ (7) ರನ್ವಯ ಮೊದಲ ಬಾರಿಗೆ ಪ್ರಕಟಿಸಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ತಾತ್ಕಾಲಿಕವಾಗಿ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಇವರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಇವರ ಕೋರಿಕೆಯಂತೆ ಉಲ್ಲೇಖ (12) ರನ್ವಯ ದಿನಾಂಕ: 03–09–2011 ರಂದು ಹೊರಡಿಸಿದ ರದ್ದತಿ ಆದೇಶದಲ್ಲಿ ರದ್ದುಪಡಿಸಲಾಯಿತು.

ಈ ರೀತಿ ಮೇಲೆ ವಿವರಿಸಿದ ಕಾರಣಗಳಿಂದ ಮೇಲ್ಕಂಡ ಇಬ್ಬರು ಬ್ಯಾಕ್‌ಲಾಗ್ ಅಭ್ಯರ್ಥಿಗಳಾದ ಇಂದಿರಮ್ಮ ಮತ್ತು ಸಿ.ಇ. ವಸಂತಕುಮಾರಿ ಇವರುಗಳ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (10) ಮತ್ತು (12) ರನ್ವಯ ರದ್ದುಪಡಿಸಿದ ಕಾರಣ ಹಾಗೂ ಸದರಿಯವರುಗಳು ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ನೇರ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಮೇಲ್ಕಂಡ ಈ ಇಬ್ಬರು ಅಭ್ಯರ್ಥಿಗಳಾದ ಇಂದಿರಮ್ಮ ಮತ್ತು ಸಿ.ಇ. ವಸಂತಕುಮಾರಿ ಇವರುಗಳ ಬದಲಿಗೆ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ Merit list ನಿಂದ Merit ಆಧಾರದ ಮೇಲೆ ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗೆ ಅನುಗುಣವಾಗಿ ಅರ್ಹರಾದ ಇಬ್ಬರು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಗಳ ಪೈಕಿ ಒಬ್ಬರನ್ನು ಮುಖ್ಯಪಟ್ಟಿಗೂ ಮತ್ತು ಇನ್ನೊಬ್ಬರನ್ನು ಹೆಚ್ಚುವರಿಪಟ್ಟಿಗೂ ನಿಯಮಾನುಸಾರ Merit ಆಧಾರದ ಬೆರಳಚ್ಚುಗಾರರೆಂದು ಆಯ್ಕೆ ಮಾಡಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಮನಗಂಡು ಉಲ್ಲೇಖ (7) ರನ್ವಯ ದಿನಾಂಕ: 08–08–2002 ರಂದು ಪ್ರಕಟಿಸಿದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಮಾತ್ರ ರದ್ದುಪಡಿಸಿ, ಸದರಿ ತಾತ್ಕಾಲಿಕ ಆಯ್ಕೆ ಪಟ್ಟಿಗೆ ಬದಲಾಗಿ ದಿನಾಂಕ: 30–01–2002 ರ ಉಲ್ಲೇಖ (6) ರ ಅಧಿಸೂಚನೆಗೆ ಅನುಗುಣವಾಗಿ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಬಂದ ಎಲ್ಲಾ ಅರ್ಜಿಗಳನ್ನು ಇನ್ನೊಮ್ಮೆ ಪರಿಶೀಲಿಸಿ ಉಲ್ಲೇಖ (1) ರ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಕೆಳಕಂಡ ಆಯ್ಕೆ ಪ್ರಾಧಿಕಾರಿಯಾದ ನಾನು ಈ ಇಲಾಖೆಯಲ್ಲಿ ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ನೇರ ನೇಮಕಾತಿಗಾಗಿ ಸದರಿ ಇಂದಿರಮ್ಮ ಮತು ಸಿ.ಇ. ವಸಂತಕುಮಾರಿ ಇವರ ಬದಲಿಗೆ ಉಲ್ಲೇಖ (1) ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಹಾಗೂ ಉಲ್ಲೇಖ (5) ರನ್ವಯ 1:1 ರ ಪ್ರಮಾಣದಲ್ಲಿ Merit ಆಧಾರದ ಮೇಲೆ ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿರುವ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಕೆಲವು ಷರತ್ತುಗಳಿಗೆ ಒಳಪಡಿಸಿ ಉಲ್ಲೇಖ (13) ರನ್ವಯ ದಿನಾಂಕ: 03–09–2011 ರಂದು ಪ್ರಕಟಿಸಿ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು 30 (ಮೂವತ್ತು) ದಿನಗಳೊಳಗೆ ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಯಿತು.

ಈ ವಿಚಾರದಲ್ಲಿ ಈವರೆವಿಗೂ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ ಹಾಗೂ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಗೆ ಆಕ್ಷೇಪಣೆಗಳನ್ನು ಸಲ್ಲಿಸುವಂತೆ ನೀಡಿದ 30 ದಿನಗಳ ಅವಧಿಯು ಸಹ ಈಗಾಗಲೇ ಮುಕ್ತಾಯವಾಗಿರುತ್ತದೆ. ಇದಲ್ಲದೇ ಉಲ್ಲೇಖ (13) ರನ್ವಯ ದಿನಾಂಕ: 03–09–2011 ರಂದು ಪ್ರಕಟಿಸಿದ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾದ ರಾಮಣ್ಣ S/O ಕಾಮಣ್ಣ ಸುರಪುರ ಇವರನ್ನು ಹೊರತುಪಡಿಸಿ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿ ಆಯ್ಕೆಯಾದ ಈ ಕೆಳಕಂಡ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಜಿಲ್ಲಾಧಿಕಾರಿಗಳು ಬಾಗಲಕೋಟೆ ಇವರಿಂದಲೂ ಮತ್ತು ಸದರಿ ಅಭ್ಯರ್ಥಿಯ ನಡತೆ ಬಗ್ಗೆ ಪೂರ್ವ ಚರಿತ್ರಾ ಪರಿಶೀಲನಾ ವರದಿಯು ಜಿಲ್ಲಾ ಪೊಲೀಸ್ ಅಧೀಕ್ಷಕರು ಬಾಗಲಕೋಟೆ ಇವರಿಂದ ಬಂದಿದ್ದು ಅವುಗಳಲ್ಲಿ ಯಾವುದೇ ಪ್ರತಿಕೂಲ ಷರಾಗಳು ಇರುವುದಿಲ್ಲ.

1) ಹನುಮಂತರಾಯ ವೆಂಕಪ್ಪ ಗುಳೇದ, ಸಂಗಮೇಶ್ವರ ಓಣಿ, ಹುನಗುಂದ

ಮೇಲ್ಕಂಡ ಕಾರಣಗಳಿಂದ ಸದರಿ ಇಂದಿರಮ್ಮ ಮತ್ತು ಸಿ.ಇ. ವಸಂತಕುಮಾರಿ ಇವರುಗಳ ಬದಲಿಗೆ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ Merit list ನಿಂದ Merit ಆಧಾರದ ಮೇಲೆ ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗೆ ಅನುಗುಣವಾಗಿ ಕೆಳಕಂಡ ಇಬ್ಬರು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಗಳ ಪೈಕಿ ಒಬ್ಬರನ್ನು ಮುಖ್ಯಪಟ್ಟಿಗೂ ಮತ್ತು ಇನ್ನೊಬ್ಬರನ್ನು ಹೆಚ್ಚುವರಿ ಪಟ್ಟಿಗೂ ನಿಯಮಾನುಸಾರ Merit ಆಧಾರದ ಮೇಲೆ ಬೆರಳಚ್ಚುಗಾರರೆಂದು ಅಂತಿಮವಾಗಿ ಆಯ್ಕೆ ಮಾಡಿ ಉಲ್ಲೇಖ (5) ರ ಸರ್ಕಾರದ ಅಧಿಸೂಚನೆ ಅನ್ವಯ 1:1 ರ ಪ್ರಮಾಣದಲ್ಲಿ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿಯ ಮುಖ್ಯಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಮನಗಂಡು ಅದರನ್ವಯ ಕೆಳಕಂಡಂತೆ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದೆ.

**ಪರಿಶಿಷ್ಟ ಪಂಗಡದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿ**

**ಸಂಖ್ಯೆ: EST–1–274/2001–02, ದಿನಾಂಕ: 13–10–2011**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1) ರ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಕೆಳಕಂಡ ಆಯ್ಕೆ ಪ್ರಾಧಿಕಾರಿಯಾದ ನಾನು ಈ ಇಲಾಖೆಯಲ್ಲಿ ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ನೇರ ನೇಮಕಾತಿಗಾಗಿ ಸದರಿ ಇಂದಿರಮ್ಮ ಮತ್ತು ಸಿ.ಇ. ವಸಂತಕುಮಾರಿ ಇವರ ಬದಲಿಗೆ ಉಲ್ಲೇಖ (1) ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಹಾಗೂ ಉಲ್ಲೇಖ (5) ರನ್ವಯ 1:1 ರ ಪ್ರಮಾಣದಲ್ಲಿ Merit ಆಧಾರದ ಮೇಲೆ ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿರುವ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅಭ್ಯರ್ಥಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಈ ಅಭ್ಯರ್ಥಿಗಳ ಈ ಅಂತಿಮ ಬ್ಯಾಕ್‌ಲಾಗ್ ಆಯ್ಕೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆಂದು ಈ ಮೂಲಕ ಆದೇಶಿಸಿದೆ.

**ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್**

**ಬೆರಳಚ್ಚುಗಾರರ ಅಂತಿಮ ಆಯ್ಕೆಯ ಮುಖ್ಯಪಟ್ಟಿ**

**Typist Backlog Final Selection list (ST) (Main list) relating to Bangalore District appointment unit**

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16–03–2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು ಮತ್ತು ಸರಾಸರಿ ಅಂಕಗಳು | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ಆಯ್ಕೆ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|
| 1 | ಹನುಮಂತರಾಯ ವೆಂಕಪ್ಪ ಗುಳೇದ, (ST) ಸಂಗಮೇಶ್ವರ ಓಣಿ, ಮುಕ್ಕಾಂ:ಪೋಸ್ಟ್ : ಹುನಗುಂದ, ತಾಲ್ಲೂಕ: ಹುನಗುಂದ, ಜಿಲ್ಲೆ: ಬಾಗಲಕೋಟೆ. | 01–06–1962 | 39–09–15 | i) SSLC: 40.166<br>ii) ಕನ್ನಡ ಬೆರಳಚ್ಚು ಸೀನಿಯರ್ 79.500<br>ಒಟ್ಟು 119.666<br>ಸರಾಸರಿ ಅಂಕಗಳು 59.833 | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತಾ ಅಭ್ಯರ್ಥಿ–1 ಮುಖ್ಯಪಟ್ಟಿ |

| | | | | | |
|---|---|---|---|---|---|
| ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಬೆರಳಚ್ಚುಗಾರರ ಅಂತಿಮ ಆಯ್ಕೆಯ ಹೆಚ್ಚುವರಿಪಟ್ಟಿ<br>Typist Backlog Final Selection list (ST) (Additional list) relating to Bangalore District appointment unit | | | | | |
| 1 | ರಾಮಣ್ಣ S/O ಕಾಮಣ್ಣ (ST)<br>ಅಲ್ಪಿ ಮೇದಾಗಲ್ಲಿ,<br>ಸುರಪುರ,<br>ಜಿಲ್ಲೆ: ಗುಲ್ಬರ್ಗಾ. | 01–06–1968 | 33–09–15 | i) SSLC:35.666<br>ii) ಕನ್ನಡ ಬೆರಳಚ್ಚು ಸೀನಿಯರ್83.500<br>ಒಟ್ಟು 119.166<br>ಸರಾಸರಿ ಅಂಕಗಳು 59.583 | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತಾ ಅಭ್ಯರ್ಥಿ–1 ಹೆಚ್ಚುವರಿಪಟ್ಟಿ |

ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಹಾಗೂ ಈ ಆಯ್ಕೆಪಟ್ಟಿಯಲ್ಲಿರುವ ಎಲ್ಲಾ ಅಭ್ಯರ್ಥಿಗಳು ಈ ಕೆಳಕಂಡ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು.

ಷರತ್ತುಗಳು:–

1. ಈ ಆಯ್ಕೆಪಟ್ಟಿಯು ಆಗಿಂದ್ದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳಿಗೆ ಮತ್ತು ಸೇವಾ ನಿಯಮಗಳಿಗೆ ಒಳಪಟ್ಟಿರುತ್ತದೆ.
2. ಈ ಆಯ್ಕೆ ಪಟ್ಟಿಯು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
3. ಯಾವುದೇ ಕಾರಣಕ್ಕಾಗಿ ಈ ಆಯ್ಕೆ ಪಟ್ಟಿಯು ಇನ್ನೊಮ್ಮೆ ಪರಿಷ್ಕರಿಸಲ್ಪಟ್ಟಲ್ಲಿ ಅಥವಾ ಬದಲಾವಣೆಯಾದಲ್ಲಿ ಸದರಿ ಪರಿಷ್ಕರಣೆಗೆ ಅನುಗುಣವಾಗಿ ಅಥವಾ ಬದಲಾವಣೆಗೆ ಅನುಗುಣವಾಗಿ ಯಾವುದೇ ಕಾರಣ ನೀಡದೇ ಈ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಪಡಿಸಿ ಮುಕ್ತಾಯಗೊಳಿಸಲಾಗುವುದು ಅಥವಾ ಪರಿಷ್ಕರಿಸಲಾಗುವುದು.
4. ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಮಾತ್ರ ಈ ಬ್ಯಾಕ್‌ಲಾಗ್ ಹುದ್ದೆಯನ್ನು ಗುರ್ತಿಸಿರುವುದರಿಂದ ಈ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಮಾತ್ರ ಕೆಲಸ ಮಾಡಲು ಸಿದ್ಧರಾಗಿರಬೇಕು. ಬೇರೆ ಇನ್ಯಾವುದೇ ಜಿಲ್ಲೆಯಲ್ಲೂ ಈ ಆಯ್ಕೆಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗುವುದಿಲ್ಲ. ಇದಕ್ಕೆ ಈ ಅಭ್ಯರ್ಥಿಗಳು ಬದ್ದರಾಗಿರತಕ್ಕದ್ದು.
5. ಮೂಲ ಅಂಕಪಟ್ಟಿಯನ್ನು ಮತ್ತು ಮೂಲ ಮೀಸಲಾತಿ ಪ್ರಮಾಣ ಪತ್ರಗಳನ್ನು ಹಾಗೂ ಮೂಲ ಜಾತಿ ಪ್ರಮಾಣ ಪತ್ರವನ್ನು ಈ ಕಛೇರಿಗೆ ಹಾಜರುಪಡಿಸದೇ ಇರುವ ಅಭ್ಯರ್ಥಿಗಳು ಅವುಗಳನ್ನು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ತಪ್ಪದೇ ಹಾಜರ್‌ಪಡಿಸತಕ್ಕದ್ದು.
6. ಈ ಆಯ್ಕೆಯ ಮುಖ್ಯ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮಾತ್ರ, ಅನುಕ್ರಮವಾಗಿ ಖಾಲಿ ಇರುವ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಅಂದರೆ ಖಾಲಿ ಹುದ್ದೆಗಳ ಲಭ್ಯತೆಗೆ ಅನುಗುಣವಾಗಿ ನೇಮಕಾತಿ ಆದೇಶ ನೀಡುವ ಬಗ್ಗೆ ಕಾನೂನು ರೀತ್ಯಾ ಪರಿಶೀಲಿಸಲಾಗುವುದು.
7. ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ನೇಮಕಾತಿ ಆದೇಶ ನೀಡಲಾಗುವುದಿಲ್ಲ ಹಾಗೂ ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ವಿಷಯದಲ್ಲಿ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲಾ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲಾ. ಹಾಗೂ ಹೆಚ್ಚುವರಿ ಪಟ್ಟಿಯಲ್ಲಿ ಸ್ಥಾನ ಪಡೆದಿರುವ ಅಭ್ಯರ್ಥಿಗಳಿಗೆ ನೇಮಕಾತಿ ಹಕ್ಕು ಪ್ರಾಪ್ತವಾಗುವುದಿಲ್ಲ.
8. ಒಂದು ವೇಳೆ ಮುಖ್ಯ ಪಟ್ಟಿಯಲ್ಲಿರುವವರು ಸರ್ಕಾರಿ ಸೇವೆಗೆ ಹಾಜರಾಗದೇ ಇದ್ದಲ್ಲಿ ಮಾತ್ರ, ಹೆಚ್ಚುವರಿ ಪಟ್ಟಿಯಲ್ಲಿರುವವರನ್ನು ಮೀಸಲಾತಿಗೆ ಅನುಗುಣವಾಗಿ ಅರ್ಹತೆ ಆಧಾರದ ಮೇಲೆ ಹೆಚ್ಚುವರಿ ಪಟ್ಟಿಯಲ್ಲಿರುವ ಕ್ರಮಾಂಕಾನುಸಾರ ಮುಂದಿನ ದಿನಗಳಲ್ಲಿ ಕಾನೂನು ರೀತ್ಯಾ ನೇಮಕಾತಿಗಾಗಿ ಪರಿಶೀಲಿಸಲಾಗುವುದು.
9. ಈ ಆಯ್ಕೆ ಪಟ್ಟಿಯಲ್ಲಿರುವ ಎಲ್ಲಾ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಬಂದು ಅಂಗೀಕೃತವಾದ ನಂತರವೇ ಅಭ್ಯರ್ಥಿಗಳಿಗೆ ನಿಯಮಾನುಸಾರ ನೇಮಕಾತಿ ನೀಡುವ ಬಗ್ಗೆ ಪರಿಶೀಲಿಸಲಾಗುವುದು ಇದಕ್ಕೆ ಅಭ್ಯರ್ಥಿಗಳು ಬದ್ದರಾಗಿರತಕ್ಕದ್ದು.
10. ಈ ಆಯ್ಕೆಪಟ್ಟಿಯಲ್ಲಿರುವ ಎಲ್ಲಾ ಅಭ್ಯರ್ಥಿಗಳ ನಡತೆ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಪೊಲೀಸ್ ಅಧೀಕ್ಷಕರಿಂದ ಈ ಅಭ್ಯರ್ಥಿಗಳ ಪೂರ್ವ ಚರಿತ್ರಾ ಪರಿಶೀಲನಾ ವರದಿಗಳು ಬಂದು ಅಂಗೀಕೃತವಾದ ನಂತರವೇ ಅಭ್ಯರ್ಥಿಗಳಿಗೆ ನಿಯಮಾನುಸಾರ ನೇಮಕಾತಿ ಆದೇಶ ನೀಡುವ ಬಗ್ಗೆ ಪರಿಶೀಲಿಸಲಾಗುವುದು. ಇದಕ್ಕೆ ಅಭ್ಯರ್ಥಿಗಳು ಬದ್ದರಾಗಿರತಕ್ಕದ್ದು.
11. ಈ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
12. ಈ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
13. ಒಂದು ವೇಳೆ ಈ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು.

ಹಾಗೂ ಅಂತಹ ಅಭ್ಯರ್ಥಿಗಳ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಈ ಬಗ್ಗೆ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ 20/– ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಬರೆದು ಕೊಡತಕ್ಕದ್ದು.

14. ಈ ಇಲಾಖೆಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ಆಯ್ಕೆಗಾಗಿ ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸಲ್ಲಿಸಿದ ನಿಗದಿತ SSLC ಅಂಕಪಟ್ಟಿ ಮತ್ತು ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿ ಪ್ರತಿ, ಜಾತಿ ಪ್ರಮಾಣ ಪತ್ರದ ಪ್ರತಿ ಹಾಗೂ ಮೀಸಲಾತಿ ವರ್ಗೀಕರಣ ಕುರಿತು ಸಲ್ಲಿಸಿದ ಆಯಾಯ ಮೀಸಲಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯರ್ಥಿಗಳನ್ನು ಆಯಾಯ Category ಯಲ್ಲಿ ಆಯ್ಕೆ ಮಾಡಲಾಗಿದೆ.

ಒಂದು ವೇಳೆ ಈ ರೀತಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆ ಬಗ್ಗೆ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಅವರ ಆಯ್ಕೆಯ Claim ಅನ್ನು ಸ್ಥಾಪಿಸಿದಲ್ಲಿ (establish ಮಾಡಿದಲ್ಲಿ) ಅಥವಾ ಈ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳ ಆಯ್ಕೆಯನ್ನು ಬೇರೆ ಇನ್ನ್ಯಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ನ್ಯಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ಶಾಶ್ವತವಾಗಿ ರದ್ದುಗೊಳಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳ ಬದಲಿಗೆ ಹೆಚ್ಚುವರಿ ಪಟ್ಟಿಯಲ್ಲಿರುವ ಅರ್ಹ ಅಭ್ಯರ್ಥಿಯನ್ನು ಅಥವಾ ಬೇರೆ ಅಭ್ಯರ್ಥಿಯನ್ನು ಕಾನೂನು ರೀತ್ಯಾ ಮೀಸಲಾತಿಗೆ ಅನುಗುಣವಾಗಿ Merit ಆಧಾರದ ಮೇಲೆ ಆಯ್ಕೆ ಮಾಡಲಾಗುವುದು ಇದಕ್ಕೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು. ಈ ಬಗ್ಗೆ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ 20/– ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಬರೆದುಕೊಡತಕ್ಕದ್ದು.

15. ಒಂದು ವೇಳೆ ಈ ಆಯ್ಕೆಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ಈ ಇಲಾಖೆಯಲ್ಲಿ ಬೆರಳಚ್ಚುಗಾರರೆಂದು ನೇಮಕಾತಿ ಹೊಂದುವ ಮೊದಲು ಅಥವಾ ಬೆರಳಚ್ಚುಗಾರರೆಂದು ನೇಮಕಾತಿ ಹೊಂದಿದ ನಂತರ ಈ ಇಲಾಖೆಯಲ್ಲಿ ಬೆರಳಚ್ಚುಗಾರರಾಗಿ ಸರ್ಕಾರಿ ಕೆಲಸಕ್ಕೆ ಹಾಜರಾದ ದಿನಾಂಕದಿಂದ ಸದರಿಯವರು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ನಿರ್ಗಮಿಸುವ ದಿನಾಂಕದವರೆಗಿನ ಅವಧಿಯಲ್ಲಿ ಅಂದರೆ ಈ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ಈ ಇಲಾಖೆಯಲ್ಲಿ ಸರ್ಕಾರಿ ನೌಕರನಾಗಿರುವ ಅವಧಿಯಲ್ಲಿ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನ್ಯಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ನ್ಯಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಈ ಆಯ್ಕೆಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ನಿಗದಿತ SSLC ಪರೀಕ್ಷೆಯಲ್ಲಿ ಅಥವಾ ಕನ್ನಡ ಟೈಪಿಂಗ್ ಸೀನಿಯರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿಲ್ಲವೆಂದಾಗಲೀ ಅಥವಾ ಯಾವುದೇ ಅಭ್ಯರ್ಥಿಯು ಸಲ್ಲಿಸಿರುವ ನಿಗದಿತ SSLC ಅಂಕಪಟ್ಟಿ ಅಥವಾ ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿಯು ನಕಲಿ (ಖೊಟ್ಟಿ) ಎಂದಾಗಲಿ ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ಅಂತಹವರ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಶಾಶ್ವತವಾಗಿ ರದ್ದುಪಡಿಸುವುದರ ಜೊತೆಗೆ ಅಂತಹ ಅಭ್ಯರ್ಥಿಗಳನ್ನು ಸರ್ಕಾರಿ ಸೇವೆಯಿಂದ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ಶಾಶ್ವತವಾಗಿ ವಜಾ ಮಾಡಲಾಗುವುದು. ಇದಕ್ಕೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು. ಈ ಬಗ್ಗೆ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ 20/– ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಬರೆದು ಕೊಡತಕ್ಕದ್ದು.

16. ಉಲ್ಲೇಖ (1) ರ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್) (ವಿಶೇಷ ನೇಮಕಾತಿ) ನಿಯಮಗಳು 2001 ರಲ್ಲಿನ ನಿಯಮ 6ರ ಪ್ರಕಾರ ಪ್ರಕಟಿಸಿರುವ ಈ ಆಯ್ಕೆಪಟ್ಟಿಯಲ್ಲಿ ಅಭ್ಯರ್ಥಿಗಳ ಹೆಸರನ್ನು ಸೇರಿಸಲಾಗಿದೆ ಅಥವಾ ಆಯ್ಕೆ ಮಾಡಿದೆ ಎಂಬ ಕಾರಣಕ್ಕಾಗಿಯೇ ಈ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳು ಉಲ್ಲೇಖ (1) ರಲ್ಲಿನ ಬ್ಯಾಕ್‌ಲಾಗ್ ನಿಯಮಗಳ ನಿಯಮ 7(2) ರಲ್ಲಿರುವ ಷರತ್ತಿನಂತೆ ಬೆರಳಚ್ಚುಗಾರರ ಹುದ್ದೆಯ ಮೇಲೆ ತಮ್ಮ ನೇಮಕಾತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ನೇಮಕಾತಿಯ ಹಕ್ಕನ್ನು ಸಾಧಿಸತಕ್ಕದ್ದಲ್ಲ. ಇದಕ್ಕೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

17. ಈ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ದುರ್ವರ್ತಿಸುತ್ತಿರುವನೆಂದು ಅಥವಾ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಹಾಗೂ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡು ಬಂದಲ್ಲಿ ಅಂತಹ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ಅಂತಹವರ ನೇಮಕಾತಿಯನ್ನು ಖಾಯಂ ಆಗಿ ರದ್ದುಪಡಿಸಲಾಗುವುದು. ಇದಕ್ಕೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

18. ಈ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ ಅಥವಾ ನಕಲಿ ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆಯುವುದು ಅಥವಾ ಪಡೆದಿರುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ ಅದೇ ಹಂತದಲ್ಲಿ ಯಾವುದೇ ಮುನ್ಸೂಚನೆ ನೀಡದೇ ಅವರ ಅಭ್ಯರ್ಥಿತನವನ್ನು ರದ್ದುಗೊಳಿಸುವುದರ ಜೊತೆಗೆ ಅವರ ವಿರುದ್ದ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು. ಹಾಗೂ ಅಂತಹವರ ನೇಮಕಾತಿಯನ್ನು ಖಾಯಂ ಆಗಿ ರದ್ದುಪಡಿಸಲಾಗುವುದು.

19. ಈ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಯು ನೇಮಕಾತಿ ಸಮಯದಲ್ಲಿ ನೇಮಕಾತಿಗೆ ಅನರ್ಹರೆಂದು ಕಂಡು ಬಂದಲ್ಲಿ ಅಂತಹವರ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ ನೇಮಕಾತಿ ಆದೇಶವನ್ನು ನೀಡಲಾಗುವುದಿಲ್ಲ.

20. ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ: 01–04–2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD(SPL)-04 PET 2005 ದಿನಾಂಕ: 31–03–2006 ರ ಆದೇಶದಲ್ಲಿ ಹೊಸದಾಗಿ New defined Contributory pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01–04–2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಆಯ್ಕೆಪಟ್ಟಿಯ ಮೂಲಕ ಆಯ್ಕೆಯಾಗಿ ತದನಂತರ ಇದರನ್ವಯ ನೇಮಕ ಹೊಂದಿದ ಈ ಎಲ್ಲಾ ಅಭ್ಯರ್ಥಿಗಳು ದಿನಾಂಕ: 31–03–2006 ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ: 31–03–2006 ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಈ ಎಲ್ಲಾ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

**ಬಿ. ಶಿವಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು
ಬೆಂಗಳೂರು.

ಪಿ.ಆರ್.307

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇಮಕಾತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲಾದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001 (ದಿನಾಂಕ:22.11.2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ಈ ಕಛೇರಿಯ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST–1–274/01–02 ದಿನಾಂಕ:17.10.2011.

**ಪ್ರಸ್ತಾವನೆ:**

ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿನ ಬೆರಳಚ್ಚುಗಾರರ ವೃಂದದಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಲಾಗಿದೆ.

| ಕ್ರ.ಸಂ. | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಪಂಗಡದಲ್ಲಿ ಗುರ್ತಿಸಲ್ಪಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | ಈ ಬ್ಯಾಕ್‌ಲಾಗ್ ಹುದ್ದೆಯನ್ನು ಗುರ್ತಿಸಲ್ಪಟ್ಟ ಜಿಲ್ಲೆಯ ಹೆಸರು |
|---|---|---|---|
| 1. | ಸಾಮಾನ್ಯ ಅರ್ಹತಾ ಅಭ್ಯರ್ಥಿ | ಒಂದು | ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ |

ಮೇಲೆ ಗುರುತಿಸಿದ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ಕಛೇರಿಯ ಉಲ್ಲೇಖ (2)ರ ಅಲಾಟ್‌ಮೆಂಟ್ ಆದೇಶದಲ್ಲಿ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಅಲಾಟ್ ಮಾಡಿರುವುದರಿಂದ ಕೆಳಕಂಡ ಅಭ್ಯರ್ಥಿಯನ್ನು ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: EST–1–274/01–02, ದಿನಾಂಕ:17.10.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಕೆಳಕಂಡ ಕಛೇರಿಯಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.5800–100–6000–125–6500–150–7100–175–7800–200–8600–225–9500–250–10500ರ ವೇತನ ಶ್ರೇಣಿಯಲ್ಲಿ ತಾತ್ಕಾಲಿಕವಾಗಿ ಬೆರಳಚ್ಚುಗಾರರೆಂದು ನೇಮಕ ಮಾಡಲಾಗಿದೆ. ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕೆಳಕಂಡ ಕಛೇರಿಗೆ ಬೆರಳಚ್ಚುಗಾರರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC / ST | ಜನ್ಮ ದಿನಾಂಕ | 16–3–2002ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು ಮತ್ತು ಸರಾಸರಿ ಅಂಕಗಳು | ಅಭ್ಯರ್ಥಿಯನ್ನು ಬೆರಳಚ್ಚುಗಾರರೆಂದು ನೇಮಕ ಮಾಡಿದ ಕಛೇರಿ | ಅಭ್ಯರ್ಥಿಯನ್ನು ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಹನುಮಂತರಾಯ ವೆಂಕಪ್ಪ ಗುಳೇದ ಸಂಗಮೇಶ್ವರ ಓಣಿ ಮುಕ್ಕಾಂ ಪೋಸ್ಟ ಹುನಗುಂದ ತಾಲ್ಲೂಕು ಹುನಗುಂದ ಜಿಲ್ಲೆ: ಬಾಗಲಕೋಟೆ. | ST | 01.06.1962 | 39.09.15 | (i) SSLC: 40.166 (ii) ಕನ್ನಡ ಬೆರಳಚ್ಚು ಸೀನಿಯರ್ 79.500 ಒಟ್ಟು: 119.666 ಸರಾಸರಿ ಅಂಕಗಳು 59.833 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ನಂ.720, ಶಿಂಷಾ ಭವನ, 46ನೇ ಅಡ್ಡ ರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು. | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಯು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1) ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2) ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
3) ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಪರೀಕ್ಷಾರ್ಥ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
4) ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.
5) ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
6) ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
7) ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
8) ಅಭ್ಯರ್ಥಿಗಳು ಅವರ ಕಾರ್ಯ, ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ದೆ, ಭಕ್ತಿ ಮತ್ತು ಆಸಕ್ತಿಯಿಂದ ತೃಪ್ತಿಕರವಾಗಿ ಮಾಡತಕ್ಕದ್ದು.
9) ಅಭ್ಯರ್ಥಿಗಳು ಅವರ ದುರ್ವರ್ತನೆಯಿಂದ, ದುರ್ನಡತೆಯಿಂದ ಹಾಗೂ ಉದಾಸೀನತೆಯಿಂದ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಿದಂತೆ ಉಂಟುಮಾಡುವ ಎಲ್ಲಾ ರೀತಿಯ ಆರ್ಥಿಕ ನಷ್ಟಗಳನ್ನು ಸರ್ಕಾರಕ್ಕೆ ಸದರಿ ಅಭ್ಯರ್ಥಿಗಳು ಭರಿಸಿಕೊಡಲು ಬದ್ದರಾಗಿರುತ್ತಾರೆ ಹಾಗೂ ಹೊಣೆಗಾರರಾಗಿರುತ್ತಾರೆಂದು ತಿಳಿಯತಕ್ಕದ್ದು.
10) ಅಭ್ಯರ್ಥಿಗಳು ಅವರ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಗಳನ್ನು ಗುಪ್ತವಾಗಿಟ್ಟು ಅದರ ಗೌಪ್ಯತೆಯನ್ನು ಕಟ್ಟುನಿಟ್ಟಾಗಿ ಕಾಪಾಡತಕ್ಕದ್ದು.

11) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

12) ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

13) ಅಭ್ಯರ್ಥಿಗಳು ಸಲ್ಲಿಸಿರುವ ಆಯಾಯ ಮೀಸಲಾತಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯಾಯ ಮೀಸಲಾತಿ category ಯಲ್ಲಿ ನೇಮಕ ಮಾಡಿರುವುದರಿಂದ ಸದರಿ ಅಭ್ಯರ್ಥಿಗಳು ಆಯಾಯ ಮೀಸಲಾತಿ category ಗೆ ಸೇರಿದವರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14) ಅಭ್ಯರ್ಥಿಗಳು ಪರಿಶಿಷ್ಠ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

15) ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಕೆಲಸಕ್ಕೆ ಹಾಜರಾದ ಕೂಡಲೇ ಮಾಡತಕ್ಕದ್ದು.

16) ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ತಪ್ಪದೇ ಹಾಜರುಪಡಿಸತಕ್ಕದ್ದು.

   1) ವಿದ್ಯಾರ್ಹತೆಯ ಬಗ್ಗೆ SSLC ಮೂಲ ಅಂಕಪಟ್ಟಿ (Original)
   2) ಕನ್ನಡ ಟೈಪಿಂಗ್ ಸೀನಿಯರ್ ಮೂಲ ಅಂಕಪಟ್ಟಿ (Original)
   3) ಜನ್ಮ ದಿನಾಂಕದ ಬಗ್ಗೆ ಮೂಲ T.C. (Original)
   4) ಸಂಬಂಧಪಟ್ಟ ಸರ್ಕಾರಿ ಜಿಲ್ಲಾ ಸರ್ಜನ್‌ನಿಂದ ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) (Physical Fitness Certificate)
   5) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

**ಅಭ್ಯರ್ಥಿಗಳು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೇ ಬರೆದು ಕೊಡತಕ್ಕದ್ದು**

17) ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

18) ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

19) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

20) ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

21) ಒಂದು ವೇಳೆ ನಾನು ಈ ಇಲಾಖೆಯಲ್ಲಿ ಬೆರಳಚ್ಚುಗಾರರೆಂದು ನೇಮಕಾತಿ ಹೊಂದುವ ಮೊದಲು ಅಥವಾ ನಾನು ಬೆರಳಚ್ಚುಗಾರರೆಂದು ನೇಮಕಾತಿ ಹೊಂದಿ ಈ ಇಲಾಖೆಯಲ್ಲಿ ಬೆರಳಚ್ಚುಗಾರರೆಂದು ಸರ್ಕಾರಿ ಕೆಲಸಕ್ಕೆ ಹಾಜರಾದ ದಿನಾಂಕದ ನಂತರ ನಾನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ನಿರ್ಗಮಿಸುವ ದಿನಾಂಕದವರೆಗಿನ ಅವಧಿಯಲ್ಲಿ ಅಂದರೆ ನಾನು ಈ ಇಲಾಖೆಯಲ್ಲಿ ಸರ್ಕಾರಿ ನೌಕರನಾಗಿರುವ ಅವಧಿಯಲ್ಲಿ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ಯಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ನಾನು ನಿಗದಿತ SSLC ಪರೀಕ್ಷೆಯಲ್ಲಿ ಅಥವಾ ಕನ್ನಡ ಟೈಪಿಂಗ್ ಸೀನಿಯರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿಲ್ಲವೆಂದಾಗಲೀ ಅಥವಾ ನಾನು

ಸಲ್ಲಿಸಿರುವ ನಿಗದಿತ SSLC ಅಂಕಪಟ್ಟಿ ಅಥವಾ ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿಯು ನಕಲಿ (ಖೊಟ್ಟಿ) ಎಂದಾಗಲೀ ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ಆಯ್ಕೆಯನ್ನು ಮತ್ತು ಈ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಶಾಶ್ವತವಾಗಿ ರದ್ದುಪಡಿಸುವುದಕ್ಕೂ ಹಾಗೂ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ನನ್ನನ್ನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ವಜಾ ಮಾಡುವುದಕ್ಕೂ ನಾನು ಒಪ್ಪಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು ರೂ.20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–3 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

22) ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD (SPL)-04 PET 2005, ದಿನಾಂಕ:31.03.2006ರ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ನೇಮಕಾತಿ ಆದೇಶದನ್ವಯ ನೇಮಕ ಹೊಂದಿದ ಸದರಿ ನೌಕರರು ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

**ಬಿ. ಶಿವಪ್ಪ**
ನೇಮಕಾತಿ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು

ಪಿ.ಆರ್.308

**IN THE COURT OF THE IV ADDL CITY CIVIL JUDGE, MAYOHALL, BANGALORE: CCH-21**

**P & S.C.NO.25047/2011, HG:05.11.2011**

**PETITIONER:**

Sri J. Jasper S/o Late Jiachial Massilamani @ Jayaseela Aged about 23 years, R/at No.353/1, 7th Main Road, viveknagar Guest House, Bangalore-47.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate in respect of amount of deceased Jiachial Massilamani @ Jayaseela who died on 09.09.2008 at Bangalore.

Be it known that No caveat has been entered and the said petition is posted for hearing on 05.11.2011 at 11'O clock. Any person's claiming to have any interest may come and participate in the proceedings before grant of Succession Certificate to the Petitioner.

**SCHEDULE**

Claim Amount in A11602 in Ministry of External Affairs, Special Kuwait Cell, ISIL, Building, (-Bhagwan Das Road, Opp. Supreme Court, New Delhi-110001.

Given under my hand and the seal of the Court, this the 18th day of October 2011.

By Order of the Court
Assistant Registrar
City Civil Court, Mayo Hall Unit, Bangalore.

PD-133

**IN THE COURT OF THE IV ADDL CITY CIVIL JUDGE, MAYOHALL, BANGALORE: CCH-21**

**P & S.C.NO.25046/2011, HG:16.12.2011**

**PETITIONER:**

1. Smt. Hussain Bee W/o late Ibrahim Khan aged 55 years
2. Mrs. Zeenath Begum D/o late Ibrahim Khan aged 31 years.

3. Mr. Noor Mohammed Khan S/o late Ibrahim Khan aged 35 years.
4. Miss. Fiaroza Khatun D/o late Ibrahim Khan aged 21 years.

All residing at No.28, North Street, First Floor, Neelasandra, Bangalore-560047.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate to the estate of the deceased Ibrahim Khan Who died on 24.04.2006.

Be it known that No caveat has been entered and the said petition is posted for hearing on 16.12.2011 at 11'O clock. Any person's claiming to have any interest may come and participate in the proceedings before grant of Succession Certificate to the Petitioners.

**SCHEDULE**

F.D. M.C. No.1337/1998 out of that a Sum of Rs.55,744/- has been deposited in year 09.08.2010 at Karnataka Bank limited Bangalore.

Given under my hand and the seal of the Court, this the 19th day of October 2011.

By Order of the Court

PD-131 Assistant Registrar

City Civil Court, Mayo Hall Unit, Bangalore.

**IN THE COURT OF THE IV ADDL CITY CIVIL JUDGE, MAYOHALL, BANGALORE: CCH-21**

**P & S.C.NO.25039/2011, HG:16.11.2011**

**PETITIONER:**

Sri Prakash Giridhar aged about 58 years S/o late Sri Giridhar Ramnarayan Residing at No,19, 8th 'B' Main road R.M.V. Extension, Bangalore-560080.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate to the estate of the deceased Smt. Meena Prakash Who died on 17.05.1999.

Be it known that No caveat has been entered and the said petition is posted for hearing on 16.11.2011 at 11'O clock. Any person's claiming to have any interest may come and participate in the proceedings before grant of Succession Certificate to the Petitioner.

**SCHEDULE Shares in different Companies**

Ankit Granites Limited, Alexcon Extrusion Limited, Alsa marine and Harvests Limited, Asian Consolidated Industries Limited, Blue Bends Petrochemical Limited, Gujarat Godrel Engg. Products Limited, GSL (INDIA) Limited, GMR Industries Limited, Hendez Electronics Limited Hitkari Fibers Limited, Harsh Polymers Indian Limited, HMG Industries Limited, Indian Magnetic Limited, J.K. Pharmachem Limited, Khatau Junker Limited, Modern Woollens Limited, Modern Syntex (INDIA) limited, Marg Securities Limited, Modern Threads (INDIA) Limited, National Auto Accessories Limited, Orkay Silk Mills Limited, Patheja Forigings and Auto Parts MGF Limited, Sri Ram Agro Tech Industries Limited, Surya Murphy Richards Limited, Sree Sarada Ferro Alloys Limited Thapar Agro Mills Limited, Thapar Concast Limited, Warren Tea Limited, Tata Tea Limited.

Given under my hand and the seal of the Court, this the 12th day of October 2011.

By Order of the Court

PD-132 Assistant Registrar

City Civil Court, Mayo Hall Unit, Bangalore.

## ಜಿಲ್ಲಾಧಿಕಾರಿಯವರ ಕಾರ್ಯಾಲಯ, ಮೈಸೂರು ಜಿಲ್ಲೆ, ಮೈಸೂರು

## OFFICE OF THE DEPUTY COMMISSIONER, MYSORE DISTRICT,MYSORE

### ಅಧಿಕೃತಜ್ಞಾಪನ

**ಸಂ:ಗ್ರಾಲೆಸಿ/90/2010–11, ದಿನಾಂಕ: 12–9–2011**

**ವಿಷಯ** ಮೈಸೂರು ಜಿಲ್ಲಾ ಕಂದಾಯ ಘಟಕದ, ತಾಲ್ಲೂಕು ಕಛೇರಿಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ**
1 ಸರ್ಕಾರದ ಅಧಿಸೂಚನೆ ಸಂಖ್ಯೆ ಕಂ.ಇ. 299 ಬಿ.ಎಸ್.ಸಿ. 2006 ದಿನಾಂಕ 3–2–2009 ಹಾಗೂ 24–7–2009
2 ಸರ್ಕಾರದ ಪತ್ರ ಸಂ. ಕಂ.ಇ.04 ಬಿ.ಎಸ್.ಸಿ.2011 ದಿನಾಂಕ 25–2–2011
3 ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 2–4–2011 ಹಾಗೂ 16–5–2011
4 ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಕೃತಜ್ಞಾಪನ ದಿನಾಂಕ 11–7–2011 ಹಾಗೂ 4–8–2011

ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲೆಯ ತಾಲ್ಲೂಕುಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು, ಸರ್ಕಾರವು ಅನುಮತಿ ನೀಡಿರುತ್ತದೆ. ಆ ಪ್ರಕಾರ ಉಲ್ಲೇಖ (1)ರ ಅಧಿಸೂಚನೆಯಂತೆ ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಿ ದಿನಾಂಕ 24–7–2009 ರಂದು ಪ್ರಕಟಿಸಿರುವಂತೆ ಖಾಲಿಯಿರುವ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆಯಂತೆ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.

ಮೈಸೂರು ಜಿಲ್ಲೆಯ ತಾಲ್ಲೂಕು ಕಛೇರಿಗಳಲ್ಲಿ ಪ್ರಸ್ತುತ ಖಾಲಿಯಿರುವ 27 ಹುದ್ದೆಗಳನ್ನು ಹಾಗೂ ನಿವೃತ್ತಿಯಿಂದ ತೆರವಾಗುವ 13 ಹುದ್ದೆಗಳು ಸೇರಿದಂತೆ ಒಟ್ಟು 40 ಗ್ರಾಮಲೆಕ್ಕಿಗ ಹುದ್ದೆಗಳನ್ನು ಕಾರ್ಯಾಲಯದ ಉಲ್ಲೇಖ (3)ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ಆನ್ ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿಯನ್ವಯ ವಿಂಗಡಿಸಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ 20–6–2011 ರಂದು ಪ್ರಕಟಿಸಿ ಈ ಪಟ್ಟಿಗೆ ಆಕ್ಷೇಪಣೆ / ತಕರಾರು ಇದ್ದಲ್ಲಿ ದಿನಾಂಕ 27–6–2011ರೊಳಗಾಗಿ ಸಲ್ಲಿಸುವಂತೆ ಸೂಚನೆ ನೀಡಲಾಗಿತ್ತು.

ಆ ಪ್ರಕಾರ 12 ಅಭ್ಯರ್ಥಿಗಳು ಆಕ್ಷೇಪಣೆಗಳನ್ನು ಸಲ್ಲಿಸಿದ್ದು, ಸದರಿ ಆಕ್ಷೇಪಣೆಗಳನ್ನು ಪರಿಶೀಲಿಸಿ, ಉಲ್ಲೇಖ (4)ರಂತೆ ದಿನಾಂಕ 11–7–2011 ರಂದು ಆದೇಶ ಹೊರಡಿಸಲಾಗಿದೆ. ಪರಿಶೀಲನಾ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಲು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಹಾಜರಾಗುವಂತೆ ಸೂಚನೆ ನೀಡಲಾಗಿದ್ದು, ಆ ಪ್ರಕಾರ ದಿನಾಂಕ 30–6–2011 ರಂದು ಮೂಲ ದಾಖಲಾತಿಗಳ ಪರಿಶೀಲನೆಗೆ ಹಾಜರಾದ ಅಭ್ಯರ್ಥಿಗಳ ದಾಖಲಾತಿಗಳನ್ನು ಪರಿಶೀಲಿಸಿ ಅಂತಿಮ ಆಯ್ಕೆ ಪಟ್ಟಿಯನ್ನು ಮೆರಿಟ್ ಆಧಾರದಲ್ಲಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಕರ್ನಾಟಕ ಆಡಳಿತ ನ್ಯಾಯಾಧೀಕರಣದಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ: 5887–5898/2009ರ ಅಂತಿಮ ಆದೇಶಕ್ಕನುಗುಣವಾಗಿ ಮಾರ್ಪಾಡು ಮಾಡುವ ಷರತ್ತಿಗೊಳಪಟ್ಟು, ಈ ಕಾರ್ಯಾಲಯದ ಉಲ್ಲೇಖ (4)ರಂತೆ ದಿನಾಂಕ 4–8–2011 ರಂದು ಪ್ರಕಟಿಸಲಾಯಿತು. ಅಂತಿಮವಾಗಿ ಪಟ್ಟಿಯನ್ನು 39 ಅಭ್ಯರ್ಥಿಗಳ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಯಿತು.

ಸಾಮಾನ್ಯ ಅಭ್ಯರ್ಥಿ 1:3 ಅನುಪಾತದಲ್ಲಿ ಪ್ರಕಟಿಸಲಾದ ಯೋಜನಾ ನಿರಾಶ್ರಿತರಿಗೆ ಮೀಸಲಾದ ಹುದ್ದೆಯ ಅಭ್ಯರ್ಥಿಗಳಲ್ಲಿ ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಯಾರೂ ಸಹಾ ಮೂಲ ದಾಖಲಾತಿಗಳ ಪರಿಶೀಲನೆಗೆ ಹಾಜರಾಗದ ಕಾರಣ, ಈ ಹುದ್ದೆಯ ಅಂತಿಮ ಅಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿಲ್ಲ.

ಮೇಲೆ ವಿವರಿಸಿರುವ ಅಂಶಗಳನುಸಾರ ಅಂತಿಮ ಪಟ್ಟಿಯಲ್ಲಿರುವ ಕೆಳಕಂಡ 39 ಅಭ್ಯರ್ಥಿಗಳಿಗೆ ಪೂರ್ವಚರಿತ್ರೆ ವರದಿ ಹಾಗೂ ಸಿಂಧುತ್ವ ಪ್ರಮಾಣ ಪತ್ರ ಪಡೆಯುವ ಷರತ್ತಿಗೊಳಪಡಿಸಿ, ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿ ರೂ:5800–10500 ರಲ್ಲಿ ನೇಮಕಾತಿ ಮಾಡಿ ಅವರ ಹೆಸರಿನ ಮುಂದೆ ನಮೂದಿಸಲ್ಪಟ್ಟಿರುವ ಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರ ನೇಮಕಗೊಳಿಸಿ ಆದೇಶಿಸಿದೆ.

| ಕ್ರ ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ | ನೇಮಕಗೊಳಿಸಿ ಹುದ್ದೆ ಮತ್ತು ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ಕಛೇರಿ |
|---|---|---|---|---|
| 1) | ಷಣ್ಮುಖ ಎಸ್ ಬಿನ್ ಶಂಕರನಾಯಕ, ಶ್ರೀಕಂಠಪುರ, ತಾಂಡಾ ಅಂಚೆ, ಗುಡ್ಡೆಕೋಟೆ ಹೋಬಳಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | ಎಸ್.ಸಿ (O) | ಗ್ರಾಮಲೆಕ್ಕಿಗರು ಹಿನಕಲ್ ವೃತ್ತ ತಾಲ್ಲೂಕು ಕಛೇರಿ, ಮೈಸೂರು. | ತಹಸೀಲ್ದಾರ್‌ರವರ ಕಛೇರಿ, ಮೈಸೂರು ತಾಲ್ಲೂಕು |
| 2) | ಮಂಜುಳ ಮೇಂದ್ರಗುತ್ತಿ ಬಿನ್ ಬಸವರಾಜ ಮೇಂಡ್ರಗುತ್ತಿ, ಮಚ್ಚಿಹಳ್ಳಿ ಗ್ರಾಮ ಕೊರಚಲಹಟ್ಟಿ, ಮಚ್ಚಿಹಳ್ಳಿ ಅಂಚೆ, ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಸ್.ಸಿ (W) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಕೆ.ಆರ್.ನಗರ | ತಹಸೀಲ್ದಾರ್‌ರವರ ಕಛೇರಿ, ಕೆ.ಆರ್.ನಗರ ತಾಲ್ಲೂಕು |

| ಕ್ರ ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ | ನೇಮಕಗೊಳಿಸಿ ಹುದ್ದೆ ಮತ್ತು ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ಕಛೇರಿ |
|---|---|---|---|---|
| 3) | ಶಿವಕುಮಾರ ಮಲ್ಗೇರಾ ಬಿನ್ ಹನುಮಂತಪ್ಪ, ಮುತ್ತಿಗೆ ಗ್ರಾಮ, ನಿಚ್ಚಪುರ ಅಂಚೆ, ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಸ್.ಸಿ (R) | ಗ್ರಾಮಲೆಕ್ಕಿಗರು ಹೊಸೂರು ವೃತ್ತ ತಾಲ್ಲೂಕು ಕಛೇರಿ,ಕೆ.ಆರ್.ನಗರ | ತಹಸೀಲ್ದಾರ್‌ರವರ ಕಛೇರಿ, ಕೆ.ಆರ್.ನಗರ ತಾಲ್ಲೂಕು |
| 4) | ಎಂ.ಆರ್.ಆನಂದ ಬಿನ್ ರಂಗಯ್ಯ, ಮನೆ ನಂ.374, ಎಸ್.ಜೆ.ಪಿ. ರಸ್ತೆ, ಕೆ.ಆರ್.ಪುರಂ, ಹಾಸನ | ಎಸ್.ಸಿ (Ex) | ಗ್ರಾಮಲೆಕ್ಕಿಗರು ಚಿಕ್ಕವಡ್ಡರಗುಡಿ ವೃತ್ತ ತಾಲ್ಲೂಕು ಕಛೇರಿ,ಕೆ.ಆರ್.ನಗರ | ತಹಸೀಲ್ದಾರ್‌ರವರ ಕಛೇರಿ, ಕೆ.ಆರ್.ನಗರ ತಾಲ್ಲೂಕು |
| 5) | ಹೆಚ್.ಕೆ. ಪುನೀತ್ ಬಿನ್ ಕೃಷ್ಣ, ಮನೆ ನಂ.28, ಪೆಟ್ರೋಲ್ ಬಂಕ್ ರಸ್ತೆ ಹತ್ತಿರ, ಸಿದ್ದಲಿಂಗಪುರ, ಮೈಸೂರು–570003 | ಎಸ್.ಸಿ (O) | ಗ್ರಾಮಲೆಕ್ಕಿಗರು, ಅಣ್ಣೂರು ವೃತ್ತ, ತಾಲ್ಲೂಕು ಕಛೇರಿ, ಹೆಚ್.ಡಿ.ಕೋಟೆ | ತಹಸೀಲ್ದಾರ್‌ರವರ ಕಛೇರಿ, ಹೆಚ್.ಡಿ.ಕೋಟೆ ತಾಲ್ಲೂಕು |
| 6) | ಎಸ್.ಜಾನಕಿ ಬಿನ್ ಶಂಕರಪ್ಪ, ಜಿ.ಹೆಚ್.ಪಿ.ಎಸ್. ಶಾಲೆ, ತಾಳಿಕಟ್ಟೆ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ | ಎಸ್.ಸಿ (H) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 7) | ವನಜಾಕ್ಷಿ ಟಿ. ಬಿನ್ ಟಿ. ಕೇಶವಮೂರ್ತಪ್ಪ, ಜೋಷಿಲಿಂಗಪುರ, ಕಡಬಗೆರೆ ಅಂಚೆ, ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಸ್.ಟಿ. (W) | ಗ್ರಾಮಲೆಕ್ಕಿಗರು ಹೊಸಕೋಟೆ ವೃತ್ತ, ತಾಲ್ಲೂಕು ಕಛೇರಿ, ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 8) | ಮಾರುತಿ ಎಂ ಬಿನ್ ಚಂದ್ರಮ್ಮ, ಹಿರಬನ್ನಿಹಟ್ಟಿ, ಹೊಸಕೆರೆ ಅಂಚೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ | ಎಸ್.ಟಿ (R) . | ಗ್ರಾಮಲೆಕ್ಕಿಗರು ಕೊಡಗಳ್ಳಿ ವೃತ್ತ ತಾಲ್ಲೂಕು ಕಛೇರಿ, ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 9) | ಕೆ.ಎನ್. ಹರೀಶ ಬಿನ್ ನರಸಿಂಹಮೂರ್ತಿ ಡಿ., ಕಳುವಾರಹಳ್ಳಿ, ಹೊಸೂರು ಅಂಚೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | 2ಎ (R) | ಗ್ರಾಮಲೆಕ್ಕಿಗರು ಹೆಗ್ಗೂರು ವೃತ್ತ ತಾಲ್ಲೂಕು ಕಛೇರಿ,ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 10) | ಹೆಚ್.ಎನ್. ಗೀತಾ ಬಿನ್ ಹೆಚ್.ವಿ. ನಾಗೇಶ, ಮನೆ ನಂ. 126, ಎಲ್.ಐ.ಜಿ., 2ನೇ ಕ್ರಾಸ್, 2ನೇ ಮೇನ್, ಶಾರದಾದೇವಿ ನಗರ, ಮೈಸೂರು | 2ಎ (O) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ,ನಂಜನಗೂಡು | ತಹಸೀಲ್ದಾರ್‌ರವರ ಕಛೇರಿ, ನಂಜನಗೂಡು ತಾಲ್ಲೂಕು |
| 11) | ಎನ್.ಕೀರ್ತಿಕುಮಾರಿ ಬಿನ್ ಪರಶುರಾಮ ಎನ್., ಬನಶಂಕರಿ ದೇವಸ್ಥಾನದ ಹತ್ತಿರ, ಕೋಟೂರು, ಬಳ್ಳಾರಿ | 2ಎ (W) | ಗ್ರಾಮಲೆಕ್ಕಿಗರು ಮಡುವಿನಹಳ್ಳಿ ವೃತ್ತ ತಾಲ್ಲೂಕು ಕಛೇರಿ, ನಂಜನಗೂಡು | ತಹಸೀಲ್ದಾರ್‌ರವರ ಕಛೇರಿ, ನಂಜನಗೂಡು ತಾಲ್ಲೂಕು |
| 12) | ಹೆಚ್.ಎಂ. ಉದಯಕುಮಾರ ಬಿನ್ ಮಹಂತಪ್ಪ ಹೆಚ್., ತಾಯಕನಹಳ್ಳಿ ಅಂಚೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | 2ಎ (R) | ಗ್ರಾಮಲೆಕ್ಕಿಗರು ಬಿ.ಬೆಟ್ಟಹಳ್ಳಿ ವೃತ್ತ ತಾಲ್ಲೂಕು ಕಛೇರಿ,ಟಿ.ನರಸೀಪುರ | ತಹಸೀಲ್ದಾರ್‌ರವರ ಕಛೇರಿ, ಟಿ.ನರಸೀಪುರ ತಾಲ್ಲೂಕು |
| 13) | ಸಿದ್ದಪ್ಪ ಬೆಕನವರ್ ಬಿನ್ ಶಿವಲಿಂಗಪ್ಪ, ಮನೆ ನಂ. 172/ಕೆ. ಫ್ಲಾಟ್ ನಂ.4, ವಿದ್ಯಾನಗರ, ಗೋಕಾಕ್, ಬೆಳಗಾಂ ಜಿಲ್ಲೆ. | 2ಎ (Ex) | ಗ್ರಾಮಲೆಕ್ಕಿಗರು ಗುಂಗ್ರಾಲ್ ಛತ್ರ ವೃತ್ತ ತಾಲ್ಲೂಕು ಕಛೇರಿ,ಮೈಸೂರು | ತಹಸೀಲ್ದಾರ್‌ರವರ ಕಛೇರಿ, ಮೈಸೂರು ತಾಲ್ಲೂಕು |
| 14) | ಸಿದ್ಧರಾಂ ಕುಂಬಾರ್ ಬಿನ್ ಈರಣ್ಣ ಕುಂಬಾರ್, ಇಂಚಗೆರೆ ಅಂಚೆ, ಅಫ್ಜಲ್‌ಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | 2ಎ (O) | ಗ್ರಾಮಲೆಕ್ಕಿಗರು ಗೊರಹಳ್ಳಿ ವೃತ್ತ ತಾಲ್ಲೂಕು ಕಛೇರಿ,ಪಿರಿಯಾಪಟ್ಟಣ | ತಹಸೀಲ್ದಾರ್‌ರವರ ಕಛೇರಿ, ಪಿರಿಯಾಪಟ್ಟಣ ತಾಲ್ಲೂಕು |
| 15) | ಹೀನಾ ಕೌಸರ್ ಜೆ ಬಿನ್ ಜಹೀರುಲ್ಲಾಖಾನ್, ಗೋಣಿಬೀಡು ವಿಲ್ಲಾ, ಗೋಣಿಬೀಡು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | 2ಬಿ (R) | ಗ್ರಾಮಲೆಕ್ಕಿಗರು ಭೂಮಿ ಕೇಂದ್ರ, ತಾಲ್ಲೂಕು ಕಛೇರಿ,ಹುಣಸೂರು ತಾಲ್ಲೂಕು | ತಹಸೀಲ್ದಾರ್‌ರವರ ಕಛೇರಿ, ಹುಣಸೂರು ತಾಲ್ಲೂಕು |

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಮತ್ತು ಕಾನೂನಿನ ಅನುಸಾರ ನನ್ನ ಮೇಲೆ ಸೂಕ್ತ ಕ್ರಮವನ್ನು ಕೈಕೊಳ್ಳಬಹುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**ಸೂಚನೆ :** ಅಭ್ಯರ್ಥಿಗಳು ಅರ್ಜಿಯ ಜೊತೆಗೆ 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

**ಪಿ.ಆರ್.311**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಚೇರಿ, ಗದಗ

## ಅಧಿಸೂಚನೆ ಸಂಖ್ಯೆ.ಎಡಿಎಮ್– 1 / 2011 ದಿನಾಂಕ 13–10–2011

**ವಿಷಯ :** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ. ಎಲ್‌ಸಿಎ II 54/2011 ದಿನಾಂಕ 01–10–2011 ರನ್ವಯ 4–ಶೀಘ್ರಲಿಪಿಗಾರರು, 9–ಬೆರಳಚ್ಚುಗಾರರು, 3–ಬೆರಳಚ್ಚು–ನಕಲುಗಾರ, 5–ಆದೇಶಿಕ ಜಾರಿಕಾರ ಮತ್ತು 08– ಜವಾನರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳವ ಬಗ್ಗೆ.

ಅರ್ಜಿಗಳನ್ನು ಸ್ವೀಕರಿಸಲು ಕಡೆಯ ದಿನಾಂಕ : **15–11–2011 ಸಂಜೆ 5–00 ಗಂಟೆ**

I. ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ವರ್ಗೀಕರಣ :

**i) ಶೀಘ್ರಲಿಪಿಗಾರರು ಹುದ್ದೆಗಳ ಸಂಖ್ಯೆ: 05 {4 + 1 ಬ್ಯಾಕಲಾಗ್}**

ವೇತನ ಶ್ರೇಣಿ : ರೂ. 7275 – 13350 ಮತ್ತು ಇತರೆ ಭತ್ಯೆಗಳು ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|---|
| ಪರಿಶಿಷ್ಟ ಪಂಗಡ (ಬ್ಯಾಕ ಲಾಗ) | 1 | –– | –– | 1 |
| ಪರಿಶಿಷ್ಟ ಜಾತಿ | –– | –– | 1 | 1 |
| ಪ್ರವರ್ಗ–3–ಎ | 1 | –– | –– | 1 |
| ಸಾಮಾನ್ಯ | 1 | 1 | –– | 2 |
| **ಒಟ್ಟು** | 3 | 1 | 1 | 5 |

**ii). ಬೆರಳಚ್ಚುಗಾರರು ಹುದ್ದೆಗಳ ಸಂಖ್ಯೆ : 09**

ವೇತನ ಶ್ರೇಣಿ : ರೂ. 5800 – 10500 ಮತ್ತು ಇತರೆ ಭತ್ಯೆಗಳು ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಕನ್ನಡ ಮಾಧ್ಯಮ ಅಭ್ಯರ್ಥಿ | **ಒಟ್ಟು** |
|---|---|---|---|---|---|
| ಪರಿಶಿಷ್ಟ ಜಾತಿ | 1 | 1 | –– | –– | 2 |
| ಪ್ರವರ್ಗ– 2 (ಎ) | 1 | 1 | –– | –– | 2 |
| ಸಾಮಾನ್ಯ | 1 | 2 | 1 | 1 | 5 |
| **ಒಟ್ಟು** | 3 | 4 | 1 | 1 | 9 |

**iii). ಬೆರಳಚ್ಚು–ನಕಲುಗಾರರು ಹುದ್ದೆಗಳ ಸಂಖ್ಯೆ : 03**

ವೇತನ ಶ್ರೇಣಿ : ರೂ. 5800 – 10500 ಮತ್ತು ಇತರೆ ಭತ್ಯೆಗಳು ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಮಾಜಿ ಸೈನಿಕ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|---|
| ಪ್ರವರ್ಗ–2(ಎ) | –– | –– | 1 | 1 |
| ಪ್ರವರ್ಗ–3(ಬಿ) | 1 | –– | –– | 1 |
| ಸಾಮಾನ್ಯ | –– | 1 | –– | 1 |
| **ಒಟ್ಟು** | **1** | **1** | **1** | **3** |

**ಶೈಕ್ಷಣಿಕ ವಿದ್ಯಾರ್ಹತೆ :**

1) ಶೀಘ್ರಲಿಪಿಗಾರರ ಹುದ್ದೆಗೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಮತ್ತು ಶೀಘ್ರಲಿಪಿಯಲ್ಲಿ ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

2) ಬೆರಳಚ್ಚುಗಾರ ಹುದ್ದೆಗೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

3) ಬೆರಳಚ್ಚು–ನಕಲುಗಾರ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಕಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

**iv) ಆದೇಶಿಕ ಜಾರಿಕಾರ ಹುದ್ದೆಗಳ ಸಂಖ್ಯೆ: 05**

ವೇತನ ಶ್ರೇಣಿ : 5200 – 8200

ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಯೋಜನಾ ನಿರಾಶ್ರಿತ | ಅಂಗವಿಕಲ | ಒಟ್ಟು |
|---|---|---|---|---|---|
| ಪ್ರವರ್ಗ–2(ಎ) | –– | 1 | –– | –– | 1 |
| ಪ್ರವರ್ಗ–2(ಬಿ) | 1 | –– | –– | –– | 1 |
| ಸಾಮಾನ್ಯ | 1 | –– | 1 | 1 | 3 |
| **ಒಟ್ಟು** | **2** | **1** | **1** | **1** | **5** |

**ಶೈಕ್ಷಣಿಕ ವಿದ್ಯಾರ್ಹತೆ :**

1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

2) ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗೆ ಆದ್ಯತೆ ನೀಡಲಾಗುವುದು

**v) ಜವಾನ ಹುದ್ದೆಗಳ ಸಂಖ್ಯೆ. 09 { 8 + 1 ಬ್ಯಾಕಲಾಗ್}**

ವೇತನ ಶ್ರೇಣಿ : 4800 – 7275

ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕ | ಒಟ್ಟು |
|---|---|---|---|---|---|
| ಪರಿಶಿಷ್ಟ ಜಾತಿ | 1 | –– | –– | 1 (ಬ್ಯಾಕ ಲಾಗ) | 2 |
| ಪ್ರವರ್ಗ 2–ಎ | –– | –– | –– | 1 | 1 |
| ಪ್ರವರ್ಗ 2–ಬಿ | –– | –– | 1 | –– | 1 |
| ಪ್ರವರ್ಗ 3–ಬಿ | –– | –– | 1 | –– | 1 |
| ಸಾಮಾನ್ಯ | 1 | 1 (ಕುಂಟರು) | 1 | 1 | 4 |
| **ಒಟ್ಟು** | **2** | **1** | **3** | **3** | **9** |

ಶೈಕ್ಷಣಿಕ ವಿದ್ಯಾರ್ಹತೆ :

1) ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

2) ಕನ್ನಡ ಓದಲು ಬರೆಯಲು ತಿಳಿದಿರಬೇಕು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ)(ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

ಶೀಘ್ರಲಿಪಿಗಾರ ಹುದ್ದೆಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷ ಉಕ್ತಲೇಖನವನ್ನು ಕನ್ನಡ ಮತ್ತು ಇಂಗ್ಲೀಷ ಭಾಷೆಯಲ್ಲಿ ನೀಡಲಾಗುವುದು ಅದನ್ನು ಲಿಪ್ಯಂತರಗೊಳಿಸಿ ಬೆರಳಚ್ಚು ಮಾಡಲು 45 ನಿಮಿಷ ಕಾಲವಕಾಶ ಕೊಡಲಾಗುವುದು. ಇದಕ್ಕೆ 100 ಅಂಕಗಳನ್ನು ನಿಗದಿಪಡಿಸಲಾಗಿದೆ.

ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ ಹುದ್ದೆಗೆ 15 ನಿಮಿಷ ಉಕ್ತಲೇಖನವನ್ನು ಕನ್ನಡ ಮತ್ತು ಇಂಗ್ಲೀಷ ಭಾಷೆಯಲ್ಲಿ ನೀಡಲಾಗುವುದು ಅದನ್ನು ಬೆರಳಚ್ಚು ಮಾಡಬೇಕು. ಇದಕ್ಕೆ 100 ಅಂಕಗಳನ್ನು ನಿಗದಿಪಡಿಸಲಾಗಿದೆ.

ಬೆರಳಚ್ಚು ಹಾಗೂ ಶೀಘ್ರಲಿಪಿಯ ಪರೀಕ್ಷೆಯ ನಂತರ ಸದರೀ ಹುದ್ದೆಗೆ 1 : 5 ರ ಅನುಪಾತದಲ್ಲಿ ಮಾತ್ರ ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು.

ಆದೇಶ ಜಾರಿಕಾರ ಹುದ್ದೆಗೆ ಕನ್ನಡದಲ್ಲಿ ಓದಲು, ಬರೆಯಲು ಹಾಗೂ ಸಾಮಾನ್ಯ ಜ್ಞಾನವನ್ನು ಪರೀಕ್ಷಿಸಲಾಗುವುದು ಇದಕ್ಕೆ 10 ಅಂಕಗಳನ್ನು ನಿಗದಿಪಡಿಸಲಾಗಿದೆ.

ಜವಾನ ಹುದ್ದೆಗೆ 10 ಅಂಕಗಳನ್ನು ನಿಗದಿಪಡಿಸಿ ಅಭ್ಯರ್ಥಿಯ ಅರ್ಹತೆ ಮತ್ತು ಸಾಮರ್ಥವನ್ನು ಪರೀಕ್ಷಿಸಲಾಗುವುದು.

ಆದೇಶಿಕ ಜಾರಿಕಾರ ಹುದ್ದೆಗೆ 1 : 25 ರ ಅನುಪಾತದಲ್ಲಿ ಮತ್ತು ಜವಾನರ ಹುದ್ದೆಗೆ 1 : 10 ರ ಅನುಪಾತದಲ್ಲಿ ಮಾತ್ರ ಸಂದರ್ಶನಕ್ಕೆ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು.

**ವಯೋಮಿತಿ :**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

2) ಗರಿಷ್ಠ ವಯೋಮಿತಿ : ಸಾಮಾನ್ಯ ವರ್ಗ : 35 ವರ್ಷಗಳು

ಪ್ರವರ್ಗ 2 ಎ, 2 ಬಿ, 3 ಎ, 3 ಬಿ : 38 ವರ್ಷಗಳು

ಪರಿಶಿಷ್ಟಜಾತಿ : ಪರಿಶಿಷ್ಟಪಂಗಡ
ಪ್ರವರ್ಗ – 1 } : 40 ವರ್ಷಗಳು

3) ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

4) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಸ್ವಯಂ ದೃಡಿಕರಿಸಿದ ಉದ್ಧೃತ ಭಾಗದ ಪ್ರತಿ ಸಲ್ಲಿಸಬೇಕು.

5) ಮೇಲ್ಕಾಣಿಸಿದ ಹುದ್ದೆಗಳಲ್ಲಿ ಮೀಸಲಾತಿ ಹುದ್ದೆಗೆ ಅರ್ಜಿ ಸಲ್ಲಿಸುವವರು ಸಧ್ಯ ಚಾಲ್ತಿಯಲ್ಲಿರುವ (ಇತ್ತೀಚಿನ) ನಮೂನೆಯಲ್ಲಿ ಸಂಬಂಧಪಟ್ಟ ಅಧಿಕಾರಿಗಳಿಂದ ಕಾನೂನು ಬದ್ಧವಾಗಿ ಪ್ರಮಾಣ ಪತ್ರವನ್ನು ಪಡೆದು ದೃಢಿಕೃತ ನಕಲನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಗ್ರಾಮೀಣ ಮೀಸಲಾತಿ ಪಡೆಯುವ ಅಭ್ಯರ್ಥಿಗಳು ನಮೂನೆ–1 ಹಾಗೂ ನಮೂನೆ–2ನ್ನು ಕಡ್ಡಾಯವಾಗಿ ಲಗತ್ತಿಸಬೇಕು.

6) ಶಾಲಾ / ಕಾಲೇಜಿನ ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು.

**ಇತರೆ ಸೂಚನೆಗಳು :**

1) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸತಕ್ಕದ್ದು.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

4) ಅರ್ಜಿಯಲ್ಲಿ ಮತ್ತು ಸ್ವ ವಿಳಾಸವಿರುವ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

5) ಸ್ವ ವಿಳಾಸವಿರುವ ಲಕೋಟೆಯ ಮೇಲೆ ರೂ. 5/– ಪೋಸ್ಟಲ್ ಸ್ಟಾಂಪನ್ನು ಅಂಟಿಸತಕ್ಕದ್ದು.

6) ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

7) ನಿರ್ದಿಷ್ಟ ಪಡಿಸಿದ ಅಂಗವಿಕಲ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಬೇರೆ ಅಂಗವಿಕಲತೆ ಇರುವವರನ್ನು ಆಯ್ಕೆಗೆ ಪರಿಗಣಿಸಲಾಗುವುದು.

8) ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವುದು. (ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 97 ಸೆನನಿ 2002 ದಿನಾಂಕ 22.11.2002).

9) ಅಭ್ಯರ್ಥಿಗಳು ಈ ನೇಮಣೂಕಿ ಪ್ರಾಧಿಕಾರದ (ಜಿಲ್ಲಾ ನ್ಯಾಯಾಲಯ, ಗದಗ) ನಿಗದಿತ ಅರ್ಜಿ ನಮೂನೆಯಲ್ಲಿಯೇ ಅರ್ಜಿಗಳನ್ನು ಸಲ್ಲಿಸಬೇಕು ಇಲ್ಲವಾದಲ್ಲಿ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

**ವಿಶೇಷ ಸೂಚನೆ :**

15/11/2011 ದಿನಾಂಕದ ಸಾಯಂಕಾಲ 5.00 ಘಂಟೆ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಆರ್.ಜೆ.ಸತೀಶ ಸಿಂಗ್**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ಗದಗ.

## ಅರ್ಜಿ ನಮೂನೆ

**(ಶೀಘ್ರಲಿಪಿಗಾರ/ಬೆರಳಚ್ಚುಗಾರ/ಬೆರಳಚ್ಚು–ನಕಲುಗಾರ / ಆದೇಶಿಕ ಜಾರಿಕಾರ / ಸೇವಕರ ಹುದ್ದೆಗೆ)**

ಸ್ವದೃಢೀಕರಿಸಿದ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವನ್ನು ಅಂಟಿಸಬೇಕು

**ಗೆ**

ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಗ ದ ಗ.

ಮಾನ್ಯರೇ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ. ಎಡಿಎಮ್ 1 / 2011, ದಿನಾಂಕ 13–10–2011 ರ ಪ್ರಕಟಣೆ ಮೇರೆಗೆ ನಾನು ಕೆಳಕಂಡ ಮಾಹಿತಿಗಳೊಂದಿಗೆ (*)____________ಹುದ್ದೆಗೆ ಹಾಗೂ (*)____________ ಮೀಸಲಾತಿ ಅಡಿ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | |
|---|---|---|---|
| 1. ಅಭ್ಯರ್ಥಿಯ ಪೂರ್ಣ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2. ತಂದೆಯ / ತಾಯಿಯ / ಗಂಡನ / ಹೆಂಡತಿಯ ಹೆಸರು | | | |
| 3. ಅಂಚೆ ವಿಳಾಸ | | | |
| 4. ಹುಟ್ಟಿದ ದಿನಾಂಕ ಮತ್ತು ವಯಸ್ಸು | ಜನ್ಮದಿನಾಂಕ | ವಯಸ್ಸು | |
| | | | |
| 5. ಶೈಕ್ಷಣಿಕ ವಿದ್ಯಾರ್ಹತೆ | ಪಡೆದ ಅಂಕಗಳು | ಗರಿಷ್ಟ ಅಂಕಗಳು | ಶೇಕಡಾವಾರು |
| 1. 7ನೇ / 10 ನೇ ತರಗತಿ | | | |
| 2. ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | | | |
| 3. ಇಂಗ್ಲೀಷ ಶೀಘ್ರಲಿಪಿ ಪ್ರೌಢದರ್ಜೆ | | | |
| 4. ಕನ್ನಡ ಬೆರಳಚ್ಚು ಪ್ರೌಢದರ್ಜೆ | | | |
| 5. ಆಂಗ್ಲ ಬೆರಳಚ್ಚು ಪ್ರೌಢದರ್ಜೆ | | | |
| 6. ಕನ್ನಡ ಬೆರಳಚ್ಚು ಪ್ರಥಮ ದರ್ಜೆ | | | |
| 7. ಆಂಗ್ಲ ಬೆರಳಚ್ಚು ಪ್ರಥಮ ದರ್ಜೆ | | | |
| 6. ವಿವಾಹಿತರೇ/ಅವಿವಾಹಿತರೇ (ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಪತಿ / ಪತ್ನಿಯನ್ನು ಹೊಂದಿದ್ದಾರೆಯೇ? | | | |
| 7. ರಾಷ್ಟ್ರಿಯತೆ | | | |
| 8. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1/ 2–ಎ/ 2–ಬಿ/ 3–ಎ/ 3–ಬಿ/ ಸಾಮಾನ್ಯ ಗುಂಪಿಗೆ ಸೇರಿದವರೇ? | | | |
| 9. ಗ್ರಾಮೀಣ/ ಅಂಗವಿಕಲ/ ಯೋಜನಾ ನಿರಾಶ್ರಿತ/ ಮಾಜಿ ಸೈನಿಕ/ ಕನ್ನಡ ಮಾಧ್ಯಮ/ ಗುಂಪಿಗೆ ಸೇರಿದವರೇ? ಹಾಗಿದ್ದರೆ ಸಂಬಂಧಪಟ್ಟವರಿಂದ ಪಡೆದ ಪ್ರಮಾಣ ಪತ್ರ ಲಗತ್ತಿಸಿರುವಿರಾ? | | | |

(*) ಹುದ್ದೆಯ ಹೆಸರು ಹಾಗೂ ಮೀಸಲಾತಿ ಬಯಸುವದನ್ನು ಕಡ್ಡಾಯವಾಗಿ ನಮೂದಿಸಬೇಕು.

**ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ ಮತ್ತು ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದು ಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.**

ಸ್ಥಳ ಃ

ದಿನಾಂಕ ಃ ಅಭ್ಯರ್ಥಿಯ ಸಹಿ

«±Ãµ ¸ÆZ£ B 1) CAZ ®PÆÃm ªÄÃ¯ ¥ÌP I u ¸ASÌ. / ºÄzAiÄ º¸gÄ / «ÄÃ¸¯Áw PÁt¸¨ÃPÄ
2) ¸Ì «¼Á¸«gÄª ®PÆÃmAiÄ ªÄÃ¯ gÆ.5/- ¥ÇÃ¸Ì¯ï ¸ÁÌA¥£ÄÌ ®Uw¸¨ÃPÄ.
3) C£Ì¬Ä¸z£ÄÌ ºÆqzÄ ºÁQ

**ಪಿ.ಆರ್.305**

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಮೈಸೂರು**

**ಅಧಿಸೂಚನೆ**

**ಸಂಖ್ಯೆ: ಆಡಳಿತ/ಅ/ 13991/2011, ದಿನಾಂಕ 14.10.2011.**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಬೆರಳಚ್ಚು–ನಕಲುಗಾರರು, ಆದೇಶ ಜಾರಿಕಾರರು ಮತ್ತು ಸೇವಕರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯ ಜೊತೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ದಿನಾಂಕ 17.10.2011 ರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕ: 11.11.2011 ಅಪರಾಹ್ನ 05.00 ಗಂಟೆ.

1. **ಶೀಘ್ರಲಿಪಿಗಾರರು:**

ಖಾಲಿ ಹುದ್ದೆಗಳು – 21

ವೇತನ ಶ್ರೇಣಿ : 7275-175-7800-200-8600-225-9500-250–10500-300–12300-350-13350.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾತಿ | 01 | 01 | 01 | 01 | – | – | – | 04 |
| ಪ.ಪಂಗಡ | – | 01 | – | – | – | – | – | 01 |
| ಪ್ರವರ್ಗ–1 | – | – | 01 | – | – | – | – | 01 |
| II - ಎ | 01 | 01 | 01 | – | – | – | – | 03 |
| II – ಬಿ | – | – | 01 | – | – | – | – | 01 |
| III – ಎ | – | 01 | – | – | – | – | – | 01 |
| III – ಬಿ | – | 01 | – | – | – | – | – | 01 |
| ಸಾಮಾನ್ಯ | 01 | 03 | 03 | 01 | – | – | 01 | 09 |
| **ಒಟ್ಟು** | **03** | **08** | **07** | **02** | – | – | **01** | **21** |

**ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ:** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 5 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

2. **ಬೆರಳಚ್ಚುಗಾರರು:**

ಖಾಲಿ ಹುದ್ದೆಗಳು – 21.

ವೇತನ ಶ್ರೇಣಿ : 5800-100-6000-125-6500-150-7100–175–7800-200-8600-225-9500-250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾತಿ | 01 | 01 | – | 01 | – | – | – | 03 |
| ಪ.ಪಂಗಡ | – | – | 01 | – | – | – | – | 01 |
| ಪ್ರವರ್ಗ–1 | – | – | 01 | – | – | – | – | 01 |
| II - ಎ | 01 | 01 | – | 01 | – | – | – | 03 |
| II – ಬಿ | – | – | 01 | – | – | – | – | 01 |

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| III – ಎ | – | – | 01 | – | – | – | – | 01 |
| III – ಬಿ | – | – | 01 | – | – | – | – | 01 |
| ಸಾಮಾನ್ಯ | 02 | 03 | 02 | 01 | 01 | 01 | – | 10 |
| **ಒಟ್ಟು** | **04** | **05** | **07** | **03** | **01** | **01** | – | **21** |

**ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ:** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

3. **ಬೆರಳಚ್ಚು–ನಕಲುಗಾರರು:**

ಖಾಲಿ ಹುದ್ದೆಗಳು – 08

ವೇತನ ಶ್ರೇಣಿ : 5800-100-6000-125-6500-150-7100–175–7800-200-8600-225-9500-250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾತಿ | – | 01 | 01 | – | – | – | – | 02 |
| ಪ.ಪಂಗಡ | – | – | – | – | – | – | – | – |
| ಪ್ರವರ್ಗ–1 | – | 01 | – | – | – | – | – | 01 |
| II - ಎ | – | 01 | – | – | – | – | – | 01 |
| II – ಬಿ | – | – | – | – | – | – | – | – |
| III – ಎ | – | – | – | – | – | – | – | – |
| III – ಬಿ | – | – | – | – | – | – | – | – |
| ಸಾಮಾನ್ಯ | – | 01 | 01 | – | 01 | 01 | – | 04 |
| **ಒಟ್ಟು** | – | **04** | **02** | – | **01** | **01** | – | **08** |

**ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಕಿರಿಯ ಶ್ರೇಣಿ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ** :ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ** : ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

4. **ಆದೇಶ ಜಾರಿಕಾರರು:**

ಖಾಲಿ ಹುದ್ದೆಗಳು – 06

ವೇತನ ಶ್ರೇಣಿ : 5500-100-6000-125-6500-150-7100–175-7800-200-8600-225–9500.

**ಹುದ್ದೆಗಳ ವರ್ಗೀಕರಣಃ**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾತಿ | – | – | 01 | – | – | – | – | 01 |
| ಪ.ಪಂಗಡ | – | – | – | – | – | – | – | – |
| ಪ್ರವರ್ಗ–1 | – | – | – | – | – | – | – | – |
| II - ಎ | – | – | 01 | – | – | – | – | 01 |
| II – ಬಿ | – | – | – | – | – | – | – | – |
| III – ಎ | – | – | – | – | – | – | – | – |
| III – ಬಿ | 01 | – | – | – | – | – | – | 01 |
| ಸಾಮಾನ್ಯ | 01 | 01 | – | 01 | – | – | – | 03 |
| **ಒಟ್ಟು** | **02** | **01** | **02** | **01** | – | – | – | **06** |

**ವಿದ್ಯಾರ್ಹತೆಃ** ಎಸ್.ಎಸ್.ಎಲ್.ಸಿ., ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು. ವಾಹನ ಚಾಲನಾ ರಹದಾರಿ ಇರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**ಆಯ್ಕೆಯ ವಿಧಾನಃ** ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ 01 ಹುದ್ದೆಗೆ 25 ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು. ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ : ಸಂದರ್ಶನವು 10 ಅಂಕಗಳನ್ನೊಳಗೊಂಡಿರುತ್ತದೆ.**

5. **ಸೇವಕರುಃ**

ಖಾಲಿ ಹುದ್ದೆಗಳು – 06

ವೇತನ ಶ್ರೇಣಿ : 4800-100-6000-125-6500-150-7100–175–7275.

**ಹುದ್ದೆಗಳ ವರ್ಗೀಕರಣಃ**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೊ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| ಪ.ಜಾತಿ | – | – | – | – | – | – | – | – |
| ಪ.ಪಂಗಡ | – | – | – | – | – | – | – | – |
| ಪ್ರವರ್ಗ–1 | – | – | – | – | – | – | – | – |
| II - ಎ | – | 01 | – | – | – | – | – | 01 |
| II – ಬಿ | – | – | – | – | – | – | – | – |
| III – ಎ | – | 01 | – | – | – | – | – | 01 |
| III – ಬಿ | – | 01 | – | – | – | – | – | 01 |
| ಸಾಮಾನ್ಯ | 01 | 01 | 01 | – | – | – | – | 03 |
| **ಒಟ್ಟು** | **01** | **04** | **01** | – | – | – | – | **06** |

**ವಿದ್ಯಾರ್ಹತೆಃ** 7ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನಃ** ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ **01** ಹುದ್ದೆಗೆ **10** ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು. ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

ಟಿಪ್ಪಣಿ : ಸಂದರ್ಶನವು **10** ಅಂಕಗಳನ್ನೊಳಗೊಂಡಿರುತ್ತದೆ.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. ಕನಿಷ್ಠ **18** ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಠ ವಯೋಮಿತಿ

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾತಿ, ಪ.ಪಂಗಡ, ಪ್ರವರ್ಗ– 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆ:**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ **10** ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ **03** ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ **10** ವರ್ಷಗಳು.
4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೊ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಪರಿವೀಕ್ಷಣಾ ಅವಧಿ:**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) **1977**ರ ಪ್ರಕಾರ **02** ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ:**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು – 570 005"**, ಇವರಿಗೆ ದಿನಾಂಕ: **11.11.2011**ರ ಅಪರಾಹ್ನ **05.00** ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ದೃಢೀಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ–**1**ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು **2**ಎ, **2**ಬಿ, **3**ಎ ಮತ್ತು **3**ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ/**96**/ಸೇನನಿ/**2005**, ದಿನಾಂಕ: **10.08.2005**ರ ಪ್ರಕಾರ ನಿಗದಿತ ನಮೂನೆ – **2**ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – **2**ರ ಜೊತೆ ನಮೂನೆ – **1**ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
8. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿ:19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಆಸುಇ/115/ಸೇನನಿ/2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.
9. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/**44**/ಸೇನನಿ/**2001**ರ ದಿನಾಂಕ **27.07.2001**ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.
10. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.
11. ವಾಹನ ಚಾಲನೆಯ ರಹದಾರಿ (ಆದೇಶ ಜಾರಿಕಾರರ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಮಾತ್ರ).
12. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.
13. ಸ್ವಯಂ ವಿಳಾಸವಿರುವ ರೂ.**5**/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆಃ**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಸಂದೇಶ್ ಹೆಚ್.ಪಿ.**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

**ಅರ್ಜಿ ನಮೂನೆ**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು.

**ರವರಿಗೆ,**
**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**
**ಮೈಸೂರು.**

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಆಡಳಿತ/ಅ/**13991/2011** ದಿನಾಂಕಃ **14.10.2011**ರ ಮೇರೆಗೆ ನಾನು ................................ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 6 | ಲಿಂಗ | ಪುರುಷ | ಮಹಿಳೆ | |
| | | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | ಇಲ್ಲ | |
| | | | | |

| | | | |
|---|---|---|---|
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | ಹೌದು | ಇಲ್ಲ |
| | | | |

| | | | | | |
|---|---|---|---|---|---|
| 13 | ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 |
| | | | | | |
| | | 2ಎ | 2ಬಿ | 3ಎ | 3ಬಿ |
| | | | | | |

| | | | | | | |
|---|---|---|---|---|---|---|
| 14 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ?<br>(ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಅಂ.ಅ | ಯೋ.ನಿ.ಅ. |
| | | | | | | |

| | | | | |
|---|---|---|---|---|
| 15 | ವಿದ್ಯಾರ್ಹತೆಃ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು ) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು |
| | 7ನೇ ತರಗತಿ | | | |
| | ಎಸ್. ಎಸ್. ಎಲ್. ಸಿ. | | | |
| | ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ) | | | |
| | ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಇತರೆ ಯಾವುದೇ ವಿದ್ಯಾರ್ಹತೆ<br>(ಸೂಚನೆಃ ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು) | | | |

| | | | | |
|---|---|---|---|---|
| 16 | ನೀವು ವಾಹನ ಚಾಲನೆಯ ಲೈಸೆನ್ಸ್ ಹೊಂದಿದ್ದೀರ?<br>(ಸ್ವಯಂ ದೃಢೀಕರಿಸಿದ ಚಾಲ್ತಿಯಲ್ಲಿರುವ ವಾಹನ ಚಾಲನಾ ರಹದಾರಿ ನಕಲನ್ನು ಲಗತ್ತಿಸಬೇಕು. ಜಾರಿಕಾರರ ಹುದ್ದೆಗೆ ಮಾತ್ರ ಅನ್ವಯವಾಗುತ್ತದೆ) | ದ್ವಿಚಕ್ರ ವಾಹನ ಚಾಲನ ರಹದಾರಿ | ಲಘು ವಾಹನ ಚಾಲನ ರಹದಾರಿ | ಭಾರೀ ವಾಹನ ಚಾಲನ ರಹದಾರಿ |
| | | | | |

| | | | |
|---|---|---|---|
| 17 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರ?<br>(ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಬೇಕು) | ಹೌದು | ಇಲ್ಲ |
| | | | |

| | | |
|---|---|---|
| 18 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | |
| 19 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ | |
| 20 | ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ? | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಅಭ್ಯರ್ಥಿಯ ಸಹಿ

ಸ್ಥಳಃ
ದಿನಾಂಕಃ

**ಪಿ.ಆರ್.304**

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಯಾದಗಿರಿ, ಜಿಲ್ಲೆ ಯಾದಗಿರಿ**

**ಅಧಿಕೃತ ಜ್ಞಾಪನ**

**ಸಂ/ಕಂ/ಸಿಬ್ಬಂದಿ–2/17/2010–11, ದಿನಾಂಕ: 29.09.2011**

**ವಿಷಯ:–** ಯಾದಗಿರಿ ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:–**

1 ಸರ್ಕಾರದ ಅಧಿಸೂಚನೆ ಪತ್ರ ಸಂಖ್ಯೆ/ಕಂಇ/04/ಬಿಎಸ್‌ಸಿ:2011 ದಿ. 25.02.2011.

2 ಈ ಕಾರ್ಯಾಲಯದ ಅಧಿಸೂಚನೆ ಸಂ/ಕಂ/ಸಿಬ್ಬಂದಿ–2/17/2010–11 ದಿನಾಂಕ 24.04.2011.

3 ಈ ಕಾರ್ಯಾಲಯದ ಅಧಿಕೃತ ಜ್ಞಾಪನ ಸಂ/ಕಂ/ಸಿಬ್ಬಂದಿ–/17/2010–11 ದಿನಾಂಕ: 19.08.2011 ಮತ್ತು 13.09.2011.

4 ಈ ಕಾರ್ಯಾಲಯದ ಮೂರನೆ ಅಂತಿಮ ಆಯ್ಕೆ ಪಟ್ಟಿ ದಿನಾಂಕ: 13.09.2011.

ಸರ್ಕಾರದ ಉಲ್ಲೇಖ–1ರ ಅಧಿಸೂಚನೆಯನ್ವಯ ಯಾದಗಿರಿ ಜಿಲ್ಲೆ ಕಂದಾಯ ಘಟಕದಲ್ಲಿನ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳುವಂತೆ ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

ಅದರನ್ವಯ ಕರ್ನಾಟಕ ನಾಗರೀಕ ಸೇವೆ (Revenue Sub Ordinate Branch) (Cadre and Recruitment)(Amendment) ನಿಯಮಗಳು 2009ರಲ್ಲಿ ನಿಗಧಿಪಡಿಸಿದ ವಿದ್ಯಾರ್ಹತೆ ಯನ್ವಯ ಈ ಕಾರ್ಯಾಲಯದ ಉಲ್ಲೇಖ(2)ರ ಅಧಿಸೂಚನೆಯಂತೆ ಯಾದಗಿರಿ ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ (22) ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮಾಡಿಕೊಳ್ಳಲು ಅರ್ಜಿಗಳನ್ನು ಆನ್‌ಲೈನ್ ಮೂಲಕ ಆಹ್ವಾನಿಸಲಾಗಿತ್ತು. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 30.05.2011ನ್ನು ನಿಗದಿಪಡಿಸಲಾಗಿತ್ತು. ಅರ್ಹ ಅಭ್ಯರ್ಥಿಗಳ (1:10)ಅನುಪಾತವಾಗಿ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ: 30.06.2011ರಂದು ಪ್ರಕಟಿಸಲಾಯಿತು.

ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಯನ್ನು ದಿನಾಂಕ: 20.07.2011ರಂದು ನಡೆಸಿ. ದಿನಾಂಕ 01.08.2011ರಂದು ಪ್ರಥಮ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ದಿನಾಂಕ: 22.08.2011ರಂದು ಎರಡನೇ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಯಿತು.

ಸದರಿ ಆಯ್ಕೆ ಪಟ್ಟಿಗಳಲ್ಲಿರುವ ಅಭ್ಯರ್ಥಿಗಳಿಗೆ ಕ್ರಮವಾಗಿ ದಿನಾಂಕ: 10.08.2011ರಂದು ಹಾಗೂ ದಿನಾಂಕ: 03.09.2011ರಂದು ಹಾಜರಾದ ಒಟ್ಟು 20 ಅಭ್ಯರ್ಥಿಗಳಿಗೆ ವೈಯಕ್ತಿಕ ಸಂದರ್ಶನ ನಡೆಸಿ ಖಾಲಿ ಹುದ್ದೆಗಳ ಮಾಹಿತಿಯನ್ನು ಅಭ್ಯರ್ಥಿಗಳಿಗೆ ನೀಡಿ, ಅಭ್ಯರ್ಥಿಗಳು ಆಪೇಕ್ಷ ಪಟ್ಟಂತಹ ಕಾರ್ಯಸ್ಥಳಕ್ಕೆ ಉಲ್ಲೇಖ(3)ರ ಮೂಲಕ ನೇಮಕಾತಿ ಆದೇಶ ನೀಡಲಾಗಿರುತ್ತದೆ.

ಉಳಿದ ಇನ್ನೊಬ್ಬ ಅಭ್ಯರ್ಥಿಯ ದಾಖಲೆಗಳು ಪರಿಶೀಲನೆ ಹಂತದಲ್ಲಿರುವುದರಿಂದ ನೇಮಕಾತಿ ಆದೇಶವನ್ನು ನೀಡಿರುವುದಿಲ್ಲ ಹಾಗೂ ಮೂರನೆ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಒಬ್ಬ ಅಭ್ಯರ್ಥಿಗೆ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಗ್ರಾಮಲೆಕ್ಕಾಧಿಕಾರಿಗಳ ನೇರ ನೇಮಕಾತಿ ಸಮಿತಿ

ಯಾದಗಿರಿ ಇವರು ದಿನಾಂಕ: 20.09.2011ರಂದು ವೈಯಕ್ತಿಕ ಸಂದರ್ಶನ ನಡೆಸಿ ಖಾಲಿ ಹುದ್ದೆಗಳ ಮಾಹಿತಿಯನ್ನು ಅಭ್ಯರ್ಥಿಗೆ ನೀಡಿ, ಅಭ್ಯರ್ಥಿಯು ಆಪೇಕ್ಷ ಪಟ್ಟಂತಹ ಕಾರ್ಯಸ್ಥಳಕ್ಕೆ ನೇಮಕಗೊಳಿಸಲು ನಿರ್ಧರಿಸಲಾಯಿತು.

ಸದರಿ ಸಂದರ್ಶನದಲ್ಲಿ ಹಾಜರಿದ್ದ ಅಭ್ಯರ್ಥಿಯು ಆಯ್ಕೆ ಮಾಡಿರುವಂತೆ ಗ್ರಾಮಲೆಕ್ಕಾಧಿಕಾರಿ ಹುದ್ದೆಗೆ ರೂ. 5800–100–6000–125–6500–150–7100–175–7800–200–8600–225–9500–2500–10500ರ ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಮುಂದೆ ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡಂತೆ ಷರತ್ತುಗಳೊಂದಿಗೆ ನೇಮಕಾತಿ ಮಾಡಿ ಆದೇಶ ಹೊರಡಿಸಲಾಗಿದೆ.

| ಕ್ರ.ಸಂ | ರೆಫರೆನ್ಸ್ ನಂ. | ಅಭ್ಯರ್ಥಿಯ ಹೆಸರು | ತಂದೆ/ಪತಿಯ ಹೆಸರು | ವಿಳಾಸ | ನೇಮಕ ಮಾಡಿರುವ ವೃತ್ತದ/ಕಛೇರಿ ಹೆಸರು |
|---|---|---|---|---|---|
| 1 | 2 | 3 | 4 | 5 | 6 |
| 1 | 101562 | ಬಸವರಾಜ ಮೂಡಗಿ | ಶ್ರೀಶೈಲ | ಮು॥ ಪೋ॥ ಜಂಬಗಿ(ಅ) ತಾ॥ಜಿ॥ ಬಿಜಾಪೂರ–586112 | ರೋಟ್ನಡಗಿ ತಾ॥ ಶಹಾಪೂರ |

**ಷರತ್ತುಗಳು:–**

1. ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗಾಗಿ ಮೂಲ ದಾಖಲಾತಿಗಳೊಂದಿಗೆ ಸಂಬಂಧಿಸಿದ ತಹಸೀಲ್ದಾರರ ಸಮಕ್ಷಮದಲ್ಲಿ ವರದಿ ಮಾಡಿಕೊಳ್ಳುವುದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮ 18ರನ್ವಯ ರದ್ದು ಪಡಿಸಲಾಗುತ್ತದೆ ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
2. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ, ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ತಾನು ವಾಸಿಸುವ ಪ್ರದೇಶದಲ್ಲಿ ಇಬ್ಬರು ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸಂಬಂಧಿಸಿದ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಿಂದ Character and Antecedents ಬಗ್ಗೆ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.
3. ಮೀಸಲಾತಿಯಡಿ ಆಯ್ಕೆ ಹೊಂದಿದ ಅಭ್ಯರ್ಥಿಗಳು ಸಲ್ಲಿಸಿರುವ ಪ್ರಮಾಣ ಪತ್ರಗಳ ಸಿಂಧುತ್ವ ಬಗ್ಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಎಸ್‌ಡಬ್ಲ್ಯೂಎಲ್/274/ಎಸ್‌ಡಿ/90 ದಿನಾಂಕ: 22.02.1993ರಲ್ಲಿ ಹೊರಡಿಸಿರುವ ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಇತ್ಯಾದಿಗಳ ಮೀಸಲಾತಿ) ನಿಯಮ 1992ರನ್ವಯ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಸಿಂಧುತ್ವ ಪ್ರಮಾಣ ಪತ್ರಗಳನ್ನು ಹಾಗೂ ನಡತೆಯ ಬಗ್ಗೆ (Antecedents) ಪರಿಶೀಲನೆಯನ್ನು ಬಾಕಿ ಇಟ್ಟಂತೆ ತಾತ್ಕಾಲಿಕವಾಗಿ ನೇಮಕಾತಿ ಆದೇಶವನ್ನು ಜಾರಿ ಮಾಡಿದೆ.
4. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೊಬೇಷನರಿ) ಈ ಅವಧಿಯಲ್ಲಿ 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ ಮತ್ತು ಕನ್ನಡ ಪರೀಕ್ಷೆ (ಎಸ್.ಎಸ್.ಎಲ್.ಸಿ ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ)ಗಳಲ್ಲಿ ಉತ್ತೀರ್ಣರಾಗುವುದು ಕಡ್ಡಾಯವಾಗಿರುತ್ತದೆ.
5. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು".
6. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಮಯದಲ್ಲಿ ಸರ್ಕಾರದ ಸಕ್ಷಮ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಹಾಜರು ಪಡಿಸುವುದು ಮತ್ತು ಅಭ್ಯರ್ಥಿಯು 2 ಪಾಸ್‌ಪೋರ್ಟ ಅಳತೆಯ ಭಾವಚಿತ್ರಗಳನ್ನು ಹಾಜರಾತಿ ಸಂದರ್ಭದಲ್ಲಿ ಆ ಕಛೇರಿ ಮುಖ್ಯಸ್ಥರ ಮುಂದೆ ಹಾಜರುಪಡಿಸುವುದು.
7. ಅಭ್ಯರ್ಥಿಯು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ/ಎಸ್‌ಪಿಎಲ್/04/ಪಿಇಟಿ/05 ದಿನಾಂಕ 31.03.2006ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ಯೋಜನೆಗೆ ಒಳಪಟ್ಟಿರುತ್ತಾರೆ.
8. ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ54:ಬಿಎಸ್‌ಸಿ:2007 ದಿನಾಂಕ 27.03.2007ರನ್ವಯ ಅಂತರ್ ಜಿಲ್ಲಾ ವರ್ಗಾವಣೆಗೆ ಯಾದಗಿರಿ ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

9. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ(ಸಿ.ಸಿ.ಎ) ನಿಯಮಗಳು 1957ರ ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ಹಾಗೂ ಕಾಲ ಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಾಮವಳಿಗಳಿಗೆ ಬದ್ಧರಾಗಿರುತ್ತಾರೆ.

10. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿತ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

11. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದ್ದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ವಜಾ ಮಾಡಲಾಗುವುದು.

12. ಇದು ನೇರನೇಮಕಾತಿಯ ಹುದ್ದೆಯಾದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು. ಹಾಗೂ ಸರ್ಕಾರದಿಂದ ಕಾಲಕಾಲಕ್ಕೆ ಹೊರಡಿಸುವ ಕಾನೂನು ತಿದ್ದುಪಡಿಗೆ ಒಳಪಟ್ಟಿರುತ್ತದೆ.

13. ಅಭ್ಯರ್ಥಿಯು ಇಲಾಖೆಯಿಂದ ಕಾಲ ಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ/ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಹಾಗೂ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

15. ಅಭ್ಯರ್ಥಿಯು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೊಂದಾಯಿಸಿದ ಗುರುತಿನ ಚೀಟಿಯನ್ನು ತಹಸೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಸೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.

16. ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರಿಯವರಾದ ಜಿಲ್ಲಾಧಿಕಾರಿಗಳು, ಯಾದಗಿರಿ ಜಿಲ್ಲೆ, ಯಾದಗಿರಿ ಇವರು ಈ ಆದೇಶವನ್ನು ಮಾರ್ಪಡಿಸುವ ಅಥವಾ ರದ್ದುಪಡಿಸುವ ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.

17. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ/ಪತ್ನಿ ಹೊಂದಿರುವ ಬಗ್ಗೆ ಕೆಸಿಎಸ್ (ನಡತೆ) ನಿಯಮಗಳು 1966ರಲ್ಲಿಯ ನಿಯಮ 28ರ ರೀತ್ಯಾ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

18. ಅಭ್ಯರ್ಥಿಯು ನೇಮಕಾತಿಹೊಂದಿದ ನಂತರ ರೂ. 50,000/ ಹಣವನ್ನು ಜಿಲ್ಲಾಧಿಕಾರಿಗಳು ಯಾದಗಿರಿ ರವರ ಹೆಸರಿನಲ್ಲಿ ಡಿ.ಡಿ ಮೂಲಕ ಈ ಕಛೇರಿಗೆ ಸಲ್ಲಿಸತಕ್ಕದ್ದು. ಈ ಹಣವನ್ನು ಠೇವಣಿ ರೂಪದಲ್ಲಿ ಇಡಲಾಗುವುದು. ಎರಡು ವರ್ಷಗಳ ನಂತರ ರೂ. 5000/–ನ್ನು ಕಡಿತಗೊಳಿಸಿ ರೂ. 45,000/– ಗಳನ್ನು ಸಂಬಂಧಪಟ್ಟ ಅಭ್ಯರ್ಥಿಗಳಿಗೆ ಮರಳಿಸಲಾಗುವುದು. ಒಂದು ವೇಳೆ ಯಾವುದಾದರೂ ಅಭ್ಯರ್ಥಿ ಎರಡು ವರ್ಷಗಳಲ್ಲಿ ನೇಮಕಾತಿ ಹೊಂದಿದ ಗ್ರಾಮಲೆಕ್ಕಾಧಿಕಾರಿ ಹುದ್ದೆಯನ್ನು ಬಿಟ್ಟುಹೋದಲ್ಲಿ ಅಂತಹ ಅಭ್ಯರ್ಥಿಗಳ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

19] ಅಭ್ಯರ್ಥಿಯು ಸದರಿ ಹುದ್ದೆಯ ನೇಮಕಾತಿಗಾಗಿ ಸಲ್ಲಿಸಿದ ದಾಖಲಾತಿಗಳಲ್ಲಿ ಯಾವುದಾದರೊಂದು ದಾಖಲೆ ದೋಷಪೂರಿತ ಎಂದು ಕಂಡುಬಂದಲ್ಲಿ ಮತ್ತು ತಪ್ಪು ಮಾಹಿತಿ ನೀಡಿರುವರೆಂದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಯ ನೇಮಕಾತಿಯನ್ನು ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 20ರ ಪ್ರಕಾರ ಯಾವ ಮುನ್ಸೂಚನೆ ನೀಡದೇ ರದ್ದು ಪಡಿಸಲಾಗುವುದು ಹಾಗೂ ಅವರ ವಿರುದ್ಧ ಶಿಸ್ತಿನ ಕ್ರಮದ ಜೊತೆಗೆ ಕ್ರಿಮಿನಲ್ ಮೊಕದ್ದಮೆ ಹೂಡಲು ಕ್ರಮ ಕೈಗೊಳ್ಳಲಾಗುವುದು.

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು,
ಗ್ರಾಮಲೆಕ್ಕಾಧಿಕಾರಿಗಳ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ,
ಯಾದಗಿರಿ ಜಿಲ್ಲೆ, ಯಾದಗಿರಿ.

ಪಿ.ಆರ್.301

**ಜಿಲ್ಲಾಧಿಕಾರಿಗಳ ಕಾರ್ಯಾಲಯ ರಾಯಚೂರು**

**ಅಧಿಕೃತ ಜ್ಞಾಪನ**

**ಸಂ:ಕಂ/ಸಿಬ್ಬಂದಿ–1//ಗ್ರಾ.ಲೆ.ನೇ/291/2010–11, ದಿನಾಂಕ:30–09–2011**

**ವಿಷಯ:–** ರಾಯಚೂರು ಜಿಲ್ಲೆ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:–** 1) ಸರ್ಕಾರದ ಪತ್ರ ಸಂ:ಕಂಇ/04/ಬಿಎಸ್‌ಸಿ/2011 ದಿ:25–02–2011.

2) ಈ ಕಾರ್ಯಾಲಯದ ಅಧಿಸೂಚನೆ ಸಮ ಸಂಖ್ಯೆ ದಿನಾಂಕ:10–05–2011.

ಸರ್ಕಾರದ ಉಲ್ಲೇಖ(1) ಪತ್ರದನ್ವಯ ರಾಯಚೂರು ಜಿಲ್ಲೆ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳುವಂತೆ ಜಿಲ್ಲಾಧಿಕಾರಿಗಳಿಗೆ ಅಧಿಕಾರಿ ನೀಡಿರುತ್ತಾರೆ. ಅದರನ್ವಯ ಕರ್ನಾಟಕ ನಾಗರೀಕ ಸೇವಾ (ರೇವೆನ್ಯೂ ಸಬಾರ್ಡಿನೇಟ್ ಬ್ರಾಂಚ್) ವೃಂದ ಮತ್ತು ನೇಮಕಾತಿ ಪರಿಷ್ಕೃತ ನಿಯಮಗಳು 2008 ರಲ್ಲಿ ನಿಗದಿಪಡಿಸಿದ ವಿದ್ಯಾರ್ಹತೆ ಅನ್ವಯ ಈ ಕಾರ್ಯಾಲಯದ ಉಲ್ಲೇಖ (2)ರ ಅಧಿಸೂಚನೆಯಂತೆ ರಾಯಚೂರು ಜಿಲ್ಲೆ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ 28 ಗ್ರಾ.ಲೆ. ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳಲು ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ:15–06–2011 ನ್ನು ನಿಗದಿಪಡಿಸಲಾಗಿತ್ತು. ಅದರಂತೆ ಅರ್ಹ ಅಭ್ಯರ್ಥಿಗಳ (1:5) ಅನುಪಾತದಲ್ಲಿ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ:15–07–2011 ರಂದು ಪ್ರಕಟಿಸಲಾಯಿತು ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ/ತಕರಾರರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ: 25–07–2011 ರವರೆಗೆ ಕಾಲಾವಕಾಶ ನೀಡಲಾಯಿತು.

ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಲು ದಿನಾಂಕ:05–08–2011 ರಂದು ನಿಗದಿಪಡಿಸಲಾಯಿತು.

ಅಭ್ಯರ್ಥಿಗಳ ಅರ್ಹತೆ ಆಧಾರದ ಮೇಲೆ ಮೂಲ ದಾಖಲೆಗಳನ್ನು ಹಾಜರುಪಡಿಸುವ ಷರತ್ತಿನ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ:07–09–2011 ರಂದು ಪ್ರಕಟಿಸಲಾಯಿತು. ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು ಗ್ರಾಮಲೆಕ್ಕಾಧಿಕಾರಿ ನೇರ ನೇಮಕಾತಿ ಸಮಿತಿ ರಾಯಚೂರು ಇವರು ದಿನಾಂಕ:30–09–2011 ರಂದು ವೈಯಕ್ತಿಕ ಕೌನ್ಸಲಿಂಗ್ ನಡೆಸಿ ಖಾಲಿ ಹುದ್ದೆಗಳ ಮಾಹಿತಿಯನ್ನು ಅಭ್ಯರ್ಥಿಗಳಿಗೆ ನೀಡಿ ಅಭ್ಯರ್ಥಿಗಳ ಅಪೇಕ್ಷೆ ಪಟ್ಟಂತಹ ಕಾರ್ಯಸ್ಥಳಕ್ಕೆ ನೇಮಕಗೊಳಿಸಲು ನಿರ್ಧರಿಸಲಾಯಿತು.

ಕೌನ್ಸಿಲಿಂಗ್‌ನಲ್ಲಿ ಅಭ್ಯರ್ಥಿಗಳು ಆಯ್ಕೆ ಮಾಡಿರುವಂತೆ ಅವರುಗಳನ್ನು ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗೆ ರೂ.5800–100–6000–125–6500–7100–175–7800–200–8600–225–9500–250–10500ಗಳ ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಮುಂದೆ ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡ ಷರತ್ತುಗಳೊಂದಿಗೆ ನೇಮಕಾತಿ ಮಾಡಿ ಆದೇಶ ಹೊರಡಿಸಲಾಗಿದೆ.

| ಕ್ರ: ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯ ಸ್ಥಳ | ಹಾಜರಾಗಬೇಕಾದ ಕಾರ್ಯಾಲಯ |
|---|---|---|---|
| 1 | 2 | 3 | 4 |
| 1 | ಕುಮಾರಿ ಶಿಲ್ಪಾ.ಬಿ ತಂದೆ ಭೀಮಪ್ಪ ಕಟ್ಟಿಮನಿ ಸಾ॥ಗೋರೆಬಾಳ ತಾ॥ ಸಿಂಧನೂರು | ಗ್ರಾಮ ಲೆಕ್ಕಿಗರು ಬಾದರ್ಲಿ ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |
| 2 | ಶ್ರೀ ಬಸಪ್ಪನಾವಿ ತಂದೆ ಶಿವಾಜಿ ಸಾ॥ ಹೊಕ್ಕುಂದಿ ತಾ॥ ಜಿ॥ ಬಿಜಾಪೂರ | ಗ್ರಾಮ ಲೆಕ್ಕಿಗರು ಗೂಗಲ್ ತಾ:ದೇವದುರ್ಗ | ತಹಸೀಲ್ ಕಾರ್ಯಾಲಯ ದೇವದುರ್ಗ |
| 3 | ಕುಮಾರಿ ವಾಣಿಶ್ರೀ ತಂದೆ ಗೋಪಾಲ ಸಾ॥ ಹಬಾಳ.ಟಿ ತಾ॥ ಸೇಡಂ | ಗ್ರಾಮ ಲೆಕ್ಕಿಗರು ಭೂಮಿ ಕೇಂದ್ರ ದೇವದುರ್ಗ | ತಹಸೀಲ್ ಕಾರ್ಯಾಲಯ ದೇವದುರ್ಗ |
| 4 | ಶ್ರೀ ಶಿವಪ್ಪ ತಂದೆ ಯಲ್ಲಪ್ಪ ಸೋಮನಾಳ ಸಾ॥ ಸಿದ್ದಾಪೂರು ತಾ॥ ಮುದ್ದೆಬಿಹಾಳ | ಗ್ರಾಮ ಲೆಕ್ಕಿಗರು ಕಾಳಾಪೂರು ತಾ:ಲಿಂಗಸುಗೂರು | ತಹಸೀಲ್ ಕಾರ್ಯಾಲಯ ಲಿಂಗಸುಗೂರು |
| 5 | ಶ್ರೀ ನಸರುದ್ದೀನ್ ತಂದೆ ಪಾಶಾಶೇಖ್ ಸಾ॥ ಗುಲಹಳ್ಳಿ ತಾ॥ ಆಳಂದ | ಗ್ರಾಮ ಲೆಕ್ಕಿಗರು ಸುಂಕೇಶ್ವರಹಾಳ ತಾ:ದೇವದುರ್ಗ | ತಹಸೀಲ್ ಕಾರ್ಯಾಲಯ ದೇವದುರ್ಗ |
| 6 | ಶ್ರೀ ಸಿದ್ದನಗೌಡ ಎಸ್.ಕಮನಟಗಿ ತಂದೆ ಶರಣಗೌಡ ಸಾ॥ ಎಂ.ಬೊಮ್ಮನಹಳ್ಳಿ ತಾ॥ ಶೋರಾಪೂರು | ಗ್ರಾಮ ಲೆಕ್ಕಿಗರು ಹಿರೇಬೂದೂರು, ತಾ:ದೇವದುರ್ಗ | ತಹಸೀಲ್ ಕಾರ್ಯಾಲಯ ದೇವದುರ್ಗ |
| 7 | ಶ್ರೀ ಪ್ರಮೋದ ಟಿ.ಎಂ ತಂದೆ ಚನ್ನವೀರ ಸ್ವಾಮಿ ಟಿ.ಎಂ ಸಾ॥ ಹುವಿನಹೆಡಗಲಿ ತಾ॥ ಬಳ್ಳಾರಿ | ಗ್ರಾಮ ಲೆಕ್ಕಿಗರು ಜಾಲಿಹಾಳ ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |

| ಕ್ರ ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯ ಸ್ಥಳ | ಹಾಜರಾಗಬೇಕಾದ ಕಾರ್ಯಾಲಯ |
|---|---|---|---|
| 1 | 2 | 3 | 4 |
| 8 | ಶ್ರೀ ಗಣೇಶ.ಜಿ ತಂದೆ ಚನ್ನಪ್ಪ.ಜಿ ಸೂಲದಹಳ್ಳಿ ಸಾ॥ ಕೂಡ್ಲಿಗಿ ತಾ॥ ಜಿ॥ ಬಳ್ಳಾರಿ | ಗ್ರಾಮ ಲೆಕ್ಕಿಗರು ಧಡೇಸುಗೂರು, ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |
| 9 | ಶ್ರೀ ಅಮರೇಶ ತಂದೆ ಮುಕ್ಕಣ್ಣ ಸಾ॥ ಬಗಡಿ ತಾಂಡ ತಾ॥ ಲಿಂಗಸೂಗೂರು | ಗ್ರಾಮ ಲೆಕ್ಕಿಗರು ಬಳಗಾನೂರು, ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |
| 10 | ಶ್ರೀ ಬಸವರಾಜ ಹಂದ್ರಾಳ ತಂದೆ ಬಾಲಪ್ಪ ಹಂದ್ರಾಳ ಸಾ॥ ಸಿದ್ದಲಿಂಗನಗರ ಮಂಗಳೂರು ತಾ॥ ಯಲಬುರ್ಗಾ | ಗ್ರಾಮ ಲೆಕ್ಕಿಗರು ಕುರಕುಂದಾ, ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |
| 11 | ಶ್ರೀ ಚಂದ್ರಶೇಖರ್ ತಂದೆ ಶಂಕರಗೌಡ ಆದಾಪೂರು ಸಾ॥ ಕೋಮಲಾಪೂರು ತಾ॥ ಲಿಂಗಸೂಗೂರು | ಗ್ರಾಮ ಲೆಕ್ಕಿಗರು ಹುಲ್ಲೂರು, ತಾ:ಸಿಂಧನೂರು | ತಹಸೀಲ್ ಕಾರ್ಯಾಲಯ ಸಿಂಧನೂರು |
| 12 | ಶ್ರೀ ಸಂಗಮೇಶ ಗುಡಿಮನಿ ತಂದೆ ದುರುಗಪ್ಪ ಸಾ॥ ಹುಲ್ಗೇರಿ ತಾ॥ ಕುಷ್ಟಗಿ | ಗ್ರಾಮ ಲೆಕ್ಕಿಗರು ಮಲ್ಲದಗುಡ್ಡ, ತಾ:ಮಾನವಿ | ತಹಸೀಲ್ ಕಾರ್ಯಾಲಯ ಮಾನವಿ |
| 13 | ಕುಮಾರಿ ವೀಣಾ ತಂದೆ ಮರಿಯಪ್ಪ ಸಾ॥ ಹಟ್ಟಿ ತಾ॥ ಲಿಂಗಸೂಗೂರು | ಗ್ರಾಮ ಲೆಕ್ಕಿಗರು ಭೂಮಿ ಕೇಂದ್ರ ಮಸ್ಕಿ, ತಾ:ಲಿಂಗಸುಗೂರು | ತಹಸೀಲ್ ಕಾರ್ಯಾಲಯ ಲಿಂಗಸುಗೂರು |
| 14 | ಕುಮಾರಿ ಸಾವಿತ್ರ ತಂದೆ ನರಸಪ್ಪ ದಾಸರ ಸಾ॥ ಶಿವಪೂರು ಬಡಾವಣೆ, ಬ್ಯಾಡಗಿ ತಾ॥ ಬ್ಯಾಡಗಿ | ಗ್ರಾಮ ಲೆಕ್ಕಿಗರು ಭೂಮಿ ಕೇಂದ್ರ ಮಸ್ಕಿ ತಾ:ಲಿಂಗಸುಗೂರು | ತಹಸೀಲ್ ಕಾರ್ಯಾಲಯ ಲಿಂಗಸುಗೂರು |
| 15 | ಶ್ರೀ ಮಹಾಂತೇಶ ತಂದೆ ಮಲ್ಲಣ್ಣ ಮೇಘರಾಜ್ ಸಾ॥ ಮೇನ್‌ಬಜಾರ್ ಲಿಂಗಸೂಗೂರು ತಾ॥ ಲಿಂಗಸೂಗೂರು | ಗ್ರಾಮ ಲೆಕ್ಕಿಗರು ಗೆಜ್ಜಲಗಟ್ಟಾ ತಾ:ಲಿಂಗಸುಗೂರು | ತಹಸೀಲ್ ಕಾರ್ಯಾಲಯ ಲಿಂಗಸುಗೂರು |
| 16 | ಶ್ರೀ ಭೀಮನಗೌಡ ಪಾಟೀಲ್ ತಂದೆ ಲಿಂಗನಗೌಡ ಸಾ॥ ಮ್ಯಾದರಗೋಳ ತಾ॥ ದೇವದುರ್ಗ | ಗ್ರಾಮ ಲೆಕ್ಕಿಗರು ಕರೆಗುಡ್ಡ, ತಾ:ದೇವದುರ್ಗ | ತಹಸೀಲ್ ಕಾರ್ಯಾಲಯ ದೇವದುರ್ಗ |

**ಷರತ್ತುಗಳು:–**

1. ಸದರಿ ಅಭ್ಯರ್ಥಿಗಳು ದಿನಾಂಕ:15–10–2011 ರೊಳಗಾಗಿ ಪಟ್ಟಿಯಲ್ಲಿ ನಮೂದಿಸಲ್ಪಟ್ಟ ತಹಸೀಲ್ದಾರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.
2. ಅಭ್ಯರ್ಥಿಯ ತನ್ನ ಹುಟ್ಟಿದ ದಿನಾಂಕ, ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಕ್ಲೇಮ್ ಮಾಡಿದ ಅಭ್ಯರ್ಥಿಗಳು ಮಾತ್ರ) ಹಾಗೂ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.
3. ಮೀಸಲಾತಿಯಡಿ ಆಯ್ಕೆ ಹೊಂದಿದ ಅಭ್ಯರ್ಥಿಗಳು ಸಲ್ಲಿಸಿರುವ ಪ್ರಮಾಣ ಪತ್ರಗಳ ಸಿಂಧುತ್ವ ಬಗ್ಗೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಎಸ್ ಡಬ್ಲು ಎಲ್/247/ಎಸ್‌ಡಿ/90 ದಿನಾಂಕ:22–02–1993 ರಲ್ಲಿ ಹೊರಡಿಸಿರುವ ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಇತ್ಯಾದಿಗಳ ಮೀಸಲಾತಿ) ನಿಯಮ 1992 ರನ್ವಯ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಸಿಂಧುತ್ವ ಪ್ರಮಾಣ ಪತ್ರ ಹಾಗೂ ನಡತೆ ಪ್ರಮಾಣ ಪತ್ರ ಪರಿಶೀಲನೆಯನ್ನು ಬಾಕಿ ಇಟ್ಟಂತೆ ತಾತ್ಕಾಲಿಕವಾಗಿ ನೇಮಕಾತಿ ಆದೇಶವನ್ನು ಜಾರಿ ಮಾಡಿದೆ.

4. ಸದರಿಯವರು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರೀಕ್ಷಾರ್ಥಿ ಅವಧಿಯಲ್ಲಿದ್ದು (ಪ್ರೊಬೇಷನರಿ) ಅವರು ಈ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯಲ್ಲಿ ಸಹ ತೇರ್ಗಡೆಯಾಗತಕ್ಕದ್ದು.
5. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಯಾವುದೇ ಸಮಯದಲ್ಲಿ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲಾಗುವುದು.
6. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ" ಸ್ವೀಕರಿಸತಕ್ಕದ್ದು.
7. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸತಕ್ಕದ್ದು.
8. ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ:ಆಇ (Rpl) 04 ಕಇಖ 2005 ದಿನಾಂಕ:31–03–2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.
9. ಸರ್ಕಾರದ ಸುತ್ತೋಲೆ ಸಂ:ಕಂಇ/54/ಬಿಎಸ್ ಸಿ/2007 ದಿನಾಂಕ:27–03–2007 ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ರಾಯಚೂರು ಜಿಲ್ಲೆಯಲ್ಲಿ ಕನಿಷ್ಠ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.
10. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ ಗುರುತಿನ ಚೀಟಿಯನ್ನು ತಹಸೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಸೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.
11. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಗಳು, 1958, ಕರ್ನಾಟಕ ನಾಗರಿಕ ಸೇವಾ ನಿಯಮಗಳು (ವರ್ಗೀಕರಣ/ನಿಯಂತ್ರಣ/ಮೇಲ್ಮನವಿ) ನಿಯಮಗಳು 1957, ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
12. ಇದು ನೇರ ನೇಮಕಾತಿ ಹುದ್ದೆಯಾದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದಜೇಷ್ಠತೆಯನ್ನು ಪರಿಗಣಿಸಲಾಗುವುದು.
13. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.
14. ಮಹಿಳಾ ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳ ಆಯ್ಕೆಯ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ: ಘಂ(ಛಿತುಟ) 232/99 ರ ಮೇಲೆ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.
15. ಗ್ರಾಮಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.5,000–00 (ಐದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಗ್ರಾಮ ಲೆಕ್ಕಿಗ ನೇರ ನೇಮಕಾತಿ ಸಮಿತಿ, ರಾಯಚೂರು ಇವರ ಹೆಸರಿನಲ್ಲಿ ಡಿ.ಡಿ ರೂಪದಲ್ಲಿ ಸಂಬಂಧಪಟ್ಟ ತಹಸೀಲ್ದಾರರಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
16. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪತ್ರವನ್ನು ಪಡೆದಿರಬೇಕು.
17. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು
ಗ್ರಾಮ ಲೆಕ್ಕಾಧಿಕಾರಿ ನೇರ ನೇಮಕಾತಿ,
ಆಯ್ಕೆ ಸಮಿತಿ ರಾಯಚೂರು ಜಿಲ್ಲೆ.

ಪಿ.ಆರ್300